# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಸಾಧಾರಣವಾಗಿ, ಎಲ್ಲರಿಗೂ ಎಚ್ಚರಿಕೆಯಲ್ಲಿರಬೇಕೆಂದು ಗೊತ್ತಿದೆ. ಪ್ರತಿಕಾರ್ಯವನ್ನೂ ಎಚ್ಚರಿಕೆಯಿಂದಲೇ ಮಾಡುವುದಾಗಿ ಭಾವಿಸುತ್ತಾರೆ. ಅಂಥವರನ್ನು ಮೋಸಪಡಿಸುವ ಬುದ್ಧಿವಂತರೂ ಕಾಣಿಸುತ್ತಿರುತ್ತಾರೆ. ಅವರ ಮಾತುಕತೆಗಳೆಲ್ಲ ತುಂಬಾ ಹಿತಚಿಂತಕರಂತೆಯೇ ಇರುತ್ತದೆ. ಆದುದರಿಂದ ಮನುಷ್ಯರು ಮತ್ತೊಬ್ಬರೊಂದಿಗೆ ವ್ಯವಹರಿಸುವಾಗ, ಮುಖ್ಯವಾಗಿ ಇನ್ನೊಬ್ಬರ ಮಾತು ಕೇಳುವುದರಲ್ಲಿ ಅದರ ಎಡಬಲಗಳನ್ನೆಲ್ಲಾ ಆಲೋಚಿಸ ಬೇಕಾಗುತ್ತದೆ. "ನಿಧಿಗಳ ಗುಟ್ಟು" ರಾಜನಿಗೆ ಸಂಬಂಧಿಸಿದ ಕಥೆಯಾದರೂ ನಮಗೆ ಕೊಡುವ ಎಚ್ಚರಿಕೆ ಇದೇ.

## ಅಮರವಾಣಿ

ವಿದ್ಯಾವಿನಯ ಸಂಪನ್ನೇ ವಿದ್ಯಾಹೀನೇ ಜಡೇ ಸತಿ
ಸ್ವಜನೇ ಪರಕೀಯೇ ಚ ಪಂಡಿತಾಃ ಸಮದರ್ಶಿನಃ

ವಿದ್ಯಾವಿನಯಗಳಿರುವವನನ್ನು, ಅವುಗಳೇನೂ ಇಲ್ಲದವನನ್ನು, ಸತ್ಪುರುಷನನ್ನು, ತನ್ನವನನ್ನು, ಇತರರನ್ನೂ ಸಹ ವಿದ್ವಾಂಸರು ಸಮದೃಷ್ಟಿಯಿಂದ ನೋಡುವರು.

ಸಂಪುಟ : ೭೫ ಆಗಸ್ಟ್ '೮೫ ಸಂಚಿಕೆ : ೨

ಬಿಡಿ ಪ್ರತಿ ರೂ. ೩-೦೦ : : ವಾರ್ಷಿಕ ಚಂದಾ ರೂ. ೩೬-೦೦



# ಚಂದಮಾಮನ ಹರಟೆ



## ನಮ್ಮ ದೇಶದಲ್ಲಿ ಮೊದಲನೇ ನಾಣ್ಯಗಳು

ಕ್ರಿಸ್ತಶಕ ಮೂರನೇ ಶತಮಾನದಲ್ಲಿ ಪ್ರಪ್ರಥಮವಾಗಿ ನಮ್ಮ ದೇಶದಲ್ಲಿ ನಾಣ್ಯಗಳನ್ನು ಪ್ರವೇಶಗೊಳಿಸಲಾಯಿತು. ಅವು ಬೆಳ್ಳಿಯ ನಾಣ್ಯಗಳೆಂದು, ಅಲೀಘರ್ ವಿಶ್ವವಿದ್ಯಾಲಯಕ್ಕೆ ಸೇರಿದ ಪ್ರೊಫೆಸರ್ "ಇರ್ಫಾನ್ ಹಬೀಬ್ ಅಭಿಪ್ರಾಯ ಪಡುತ್ತಾರೆ.

## ದೊಡ್ಡ ದೊಸೆ ಪ್ರಮಾಣ



ಉನ್ನತ ಪ್ರಮಾಣಗಳ ಚಲನಚಿತ್ರಗಳಿಗೆ ಬಹುಮಾನ ಕೊಡಲು ಒಟ್ಟು ಪ್ರಪಂಚದ ಹಲವು ದೇಶಗಳಲ್ಲಿ ವಿವಿಧ ಸಂಸ್ಥೆಗಳಿವೆ. ಆದರೆ ವಿಪರೀತ ಬೇಸರ ಪಡಿಸುವ ಚಿತ್ರಗಳಿಗೆ ಬಹುಮಾನ ಕೊಡಲು ಇತ್ತೀಚೆಗೆ ನ್ಯೂಜರ್ಸೀಯಲ್ಲಿ ಒಂದು ಕಮಿಟೀ ಏರ್ಪಾಟಾಗಿದೆ. " ಚಿತ್ರಗಳನ್ನು ಆರಿಸಲು ನಮ್ಮ ಸದಸ್ಯರು ಬಹಳವಾಗಿ ನಿದ್ರೆ ಮಾಡಬೇಕಾಗಿ ಬಂತು " ಎನ್ನುತ್ತಾನೆ ಆ ಕಮಿಟಿಯ ಕಾರ್ಯದರ್ಶಿ.



## ಫಿಲ್ಮ್ ಇಲ್ಲದೆಯೇ ಎಕ್ಸ್-ರೇಗಳು

ಫಿಲ್ಮ್ ಅಗತ್ಯವಿಲ್ಲದೆಯೇ ಎಕ್ಸ್‌ರೇ ತೆಗೆಯುವ ವಿಧಾನವು, ಪ್ರಪಂಚದಲ್ಲಿ ಮೊತ್ತಮೊದಲನೇ ಸಾರಿಯಾಗಿ ಜಪಾನಿನಲ್ಲಿ ಕಂಡು ಹಿಡಿದರು. ಈ ವಿಧಾನದ ಮೂಲಕ ಕ್ಷಣಮಾತ್ರದಲ್ಲಿ ಟೆಲಿವಿಜನ್ ತೆರೆಯ ಮೇಲೆ ರೋಗ ನಿದಾನವು ಸಾಧ್ಯವಾಗುತ್ತದೆ.

## ನಿಮಗೆ ಗೊತ್ತೇ ?

೧. ಹರ್ಷವರ್ಧನನ ಪರಿಪಾಲನಾ ಕಾಲದಲ್ಲಿ ಭಾರತ ದೇಶವನ್ನು ಸಂದರ್ಶಿಸಿದ ಚೈನಾ ಯಾತ್ರಿಕನು ಯಾರು ?

೨. ಎರಡನೇ ಪುಲಕೇಶಿ ಯಾವ ವಂಶಕ್ಕೆ ಸೇರಿದವನೆಂದು ನಿಮಗೆ ಗೊತ್ತಿದೆಯೆ ?

೩. ಕುತುಬ್‌ಮಿನಾರ್‌ಗಿಂತ ಎತ್ತರವಾದ ಶಿಖರ ನಿರ್ಮಿಸಲು ತಲೆ ಹಾಕಿ ಅದು ಪೂರ್ತಿಯಾಗುವ ಮೊದಲೇ ಸತ್ತ ಸುಲ್ತಾನನು ಯಾರು ?

೪. ಅಕ್ಬರ್ ಸಿಂಹಾಸನವನ್ನು ಅಧಿಷ್ಠಿಸುವಾಗ ಅವನ ವಯಸ್ಸು ಎಷ್ಟೆಂದು ನಿಮಗೆ ತಿಳಿದಿದೆಯೆ ?

೫. ಛತ್ರಪತಿ ಶಿವಾಜಿಯ ತಂದೆಯ ಹೆಸರೇನು ?

(ಉತ್ತರ ೬೪ ನೇ ಪುಟದಲ್ಲಿ)



# ನಿಜಸ್ವರೂಪ

ಒಂದಾನೊಂದು ಕಾಲದಲ್ಲಿ ಒಂದು ದಿನ ನಾರದನು ಆಕಾಶ ಮಾರ್ಗದಲ್ಲಿ ಹೋಗುತ್ತಾ ಇದ್ದನು. ಆಗ ದೇವದೂತರು ಒಬ್ಬ ಮನುಷ್ಯನನ್ನು ಸ್ವರ್ಗಲೋಕದ ಕಡೆಗೆ ಕರೆದುಕೊಂಡು ಹೋಗುವುದನ್ನು ಅವನು ನೋಡಿದನು.

ಕೂಡಲೇ ನಾರದನು ಅವರ ಬಳಿಗೆ ಹೋಗಿ "ಇವನು ಯಾವ ಪುಣ್ಯವಂತ ? ಸ್ವರ್ಗಕ್ಕೆ ಕರೆದುಕೊಂಡು ಹೋಗುವ ಹಾಗೆ ಇವನೇನು ಪುಣ್ಯ ಮಾಡಿದ್ದಾನೆ ? " ಎಂದು ಕೇಳಿದನು.

ಅದಕ್ಕೆ ದೇವದೂತರು, "ಇವನ ಹೆಸರು ಶರಭನೆಂದು. ಬದುಕಿದ್ದಷ್ಟು ಕಾಲವೂ ಪಾಪಗಳನ್ನೇ ಮಾಡಿದನು. ಇವನ ಸ್ವರ್ಗಪ್ರಾಪ್ತಿಗೆ ಅದೇನು ಕಾರಣವೆಂಬುದು ನಮಗೆ ತಿಳಿಯದು. ಯಮಧರ್ಮನೇ ಇವನನ್ನು ಸ್ವರ್ಗಕ್ಕೆ ಒಯ್ಯುವಂತೆ ನಮಗೆ ಹೇಳಿದ್ದು. ಆದ್ದರಿಂದ ನೀವು ಯಮಧರ್ಮನನ್ನು ಕೇಳಿದರೆ ತಿಳಿದೀತು " ಎಂದರು.

ಆ ಮಾತನ್ನು ಕೇಳಿ ನಾರದನಿಗೆ ಆಶ್ಚರ್ಯವಾಯಿತು. ಪಾಪಕಾರ್ಯ ಮಾಡಿದವರಿಗೆ ಸ್ವರ್ಗ ಸಿಗಲು ಸಾಧ್ಯವೇ ಇಲ್ಲ. ಇವನಂತೂ ಜೀವಿಸಿದ್ದಷ್ಟು ಕಾಲವೆಲ್ಲಾ ಪಾಪಗಳನ್ನೇ ಮಾಡಿಕೊಂಡಿದ್ದವನೆಂದು ದೇವತೆಗಳೇ ಹೇಳುತ್ತಾರೆ. ಅಂಥವನಿಗೆ ಸ್ವರ್ಗವಾಸವೆಂದರೇನಿದು ? ಇದರೊಳಗಿರುವ ರಹಸ್ಯವನ್ನು ತಿಳಿಯಬೇಕೆಂಬ ಕುತೂಹಲದಿಂದ ನಾರದನು ಯಮಲೋಕಕ್ಕೆ ಹೋದನು.

ಯಮಧರ್ಮರಾಜನು ನಾರದನನ್ನು ಗೌರವಾದರಗಳಿಂದ ಸ್ವಾಗತಮಾಡಿ ಕುಶಲ ವಿಚಾರಿಸಿದನು. ತರುವಾಯ ನಾರದನು ತಾನು ನೋಡಿದ ಶರಭನೆಂಬ ಮನುಷ್ಯನ ಸಂಗತಿಯನ್ನು ಹೇಳಿ, ಅದರಲ್ಲಿ ತನಗೆ ಬಂದ ಸಂದೇಹವನ್ನು ತೀರಿಸುವಂತೆ ಕೇಳಿಕೊಂಡನು.

ಯಮಧರ್ಮರಾಜನು ಮುಗುಳು ನಗುವಿನಿಂದ, " ಆ ಶರಭನು ಬಹಳ ಬಡವನಾಗಿರುವವನು. ಆದುದರಿಂದ ಯಾವಾಗಲೂ ಏನೋ ಒಂದು ಪಾಪಕಾರ್ಯ ಮಾಡುತ್ತಲೇ ಬದುಕಿಕೊಂಡಿದ್ದ. ಆ ಕಾರಣದಿಂದ ಅವನು ಪೂರ್ತಿ ನರಕದಲ್ಲೇ ಇರಬೇಕಾಗಿತ್ತು. ಆದರೆ ಒಂದು ಸಾರಿ ಆಪತ್ತಿನಲ್ಲಿದ್ದ ಅವನಿಗಿಂತ ಹೆಚ್ಚಿನ ಬಡವನೊಬ್ಬನು ಅವನ ಹತ್ತಿರ ಬಂದು ಏನಾದರೂ ಸಹಾಯಮಾಡಬೇಕೆಂದು ಕೇಳಿದ. ಶರಭನು ಅವನ ಮೇಲೆ ಕನಿಕರಪಟ್ಟು,

ಡಿ. ವೆಂಕಟ್ರಮಣ



ತನಗೆ ಯಾವ ಸಂಪಾದನೆಯೂ ಇಲ್ಲವೆಂದೂ, ಹಣವಿರುತ್ತಿದ್ದರೆ ತಪ್ಪದೆ ಕೊಡುತ್ತಿದ್ದೆನೆಂದೂ ಹೇಳಿದ. ಮನಃಪೂರ್ವಕವಾಗಿ ಹೇಳಿದ ಆ ಮಾತಿನಿಂದ ಆ ಪಾಪಗಳು ಬಹಳ ಮಟ್ಟಿಗೆ ಪ್ರಕ್ಷಾಳಿತವಾದುವು. ಉಳಿದ ಸ್ವಲ್ಪ ಪಾಪಕ್ಕೆ ನರಕದರ್ಶನ ಮಾತ್ರ ಮಾಡಿ ಈಗ ಸ್ವರ್ಗಕ್ಕೆ ಹೋಗುತ್ತಿದ್ದಾನೆ. ಅಷ್ಟೇ ಹೊರತು ಇದರಲ್ಲಿ ಮತ್ತಾವ ರಹಸ್ಯವೂ ಇಲ್ಲ" ಎಂದನು.

"ಯಮಧರ್ಮರಾಜಾ, ಇದರಲ್ಲಿ ಏನೋ ಮೋಸವಿದೆ. ಸರಳ ನ್ಯಾಯ ದೃಷ್ಟಿಯ ನೀನು ಮೋಸ ಹೋಗಿರಬೇಕೆಂದು ನನ್ನ ಅನುಮಾನ" ಎಂದನು ನಾರದ.

"ಮೋಸವೇ? ಏನದು? ನಾನು ಮೋಸ ಹೋಗುವಷ್ಟು ಏನಾಗಿದೆ?" ಎಂದು ಯಮನು ಬೆಚ್ಚಿ ಬೀಳುತ್ತಾ ಕೇಳಿದನು.

"ಮೋಸವೇ ಹೌದು. ಇತರರಿಗೆ ಸಹಾಯ ಮಾಡಬೇಕೆಂಬ ಮನಸ್ಸಿರುವ ಮನುಷ್ಯನು, ತಾನೆಷ್ಟು ಬಡಸ್ಥಿತಿಯಲ್ಲಿದ್ದರೂ ತನಗಿರುವುದರಲ್ಲಿ ದಾನಮಾಡಿ ತೀರುತ್ತಾನೆ. ಇಲ್ಲದಿದ್ದರೆ ತಾನು ಅಸಹಾಯಕನೆಂದು ಸುಮ್ಮನಿರುವನೇ ಹೊರತು, ಮಾತಿನ ಮೋಡಿಯನ್ನು ಹೂಡುವುದಿಲ್ಲ. ತನ್ನ ಹತ್ತಿರ ಇಲ್ಲದುದನ್ನು ಇರುತ್ತಿದ್ದರೆ ಕೊಡುತ್ತಿದ್ದೆನೆಂದು ಮಾತಿನ ಜಾಲ ತೋರಿಸುತ್ತಿದ್ದಿಲ್ಲ. ಕುತ್ಸಿತ ಬುದ್ಧಿಯವರಿಗೇ ಈ ಬಗೆಯ ಮಾತಿನ ಗಾರುಡಿತನವಿರುತ್ತದೆ. ಈ ಶರಭನು ಅಂತಹವನೆಂದೇ ನನ್ನ ಅನುಮಾನ. ನೀನು ಅವನಿಗೆ ಬೇಕಾದಷ್ಟು ಧನವು ಸಿಗುವ ಹಾಗೆ ಮಾಡಿ, ಅವನ ಮನಸ್ಸನ್ನು ತಿಳಿದುಕೊಂಡರಷ್ಟೇ ಯಮಧರ್ಮನೆನಿಸುವಿ ನನಗೆ ತೋರಿದ್ದನ್ನು ಹೇಳಿದೆನು. ಇನ್ನು ನಿನ್ನಿಷ್ಟ" ಎಂದನು ನಾರದ.

"ಹಾಗೆಯೇ ಆಗಲಿ, ನಾರದಾ!" ಎಂದು ಯಮಧರ್ಮನು ಆ ಕ್ಷಣದಲ್ಲೇ ಕಿಂಕರರನ್ನು ಕಳುಹಿಸಿ ಸ್ವರ್ಗದ್ವಾರವನ್ನು ಸಮೀಪಿಸುತ್ತಿದ್ದ ಶರಭನನ್ನು ಹಿಂದೆ ತರಿಸಿಕೊಂಡನು.

ಅನಂತರ ಯಮಧರ್ಮನು ನಾರದನ ಸಲಹೆಯ ಪ್ರಕಾರ ಶರಭನನ್ನು ಭೂಮಿಯಲ್ಲಿ ಬದುಕಲು ಬಿಟ್ಟು, ಅವನಿಗೆ ಸ್ವಲ್ಪ ಹಣವು ಸಿಗುವಂತೆ ಮಾಡಿದನು. ಈಗ ಶರಭನು ಸಾಮಾನ್ಯ ರೈತನಾಗಿದ್ದನು. ಆದಾಯ ಚೆನ್ನಾಗಿಯೇ ಬರುತ್ತಿದ್ದಿತು. ಹೆಚ್ಚಿನ ಅಡಚಣೆ ಏನೂ ಇಲ್ಲದೆ ಸುಖವಾಗಿ ಜೀವಿಸಿಕೊಂಡಿದ್ದನು.

ಹಾಗಿರುವಾಗ ಆಪತ್ತಿನಲ್ಲಿದ್ದ ಒಬ್ಬನು ಶರಭನ ಬಳಿಗೆ ಬಂದು ತನ್ನ ಕಷ್ಟನಷ್ಟಗಳನ್ನು ಹೇಳಿಕೊಂಡು, ತನಗೇನಾದರೂ ಸಹಾಯ ಮಾಡಬೇಕೆಂದು ಕೇಳಿದನು.

ಶರಭನು ಅವನನ್ನು ಬಹಳವಾಗಿ ಕನಿಕರಪಡುವಂತೆ ನೋಡಿ, "ನಾನು ಸಾಮಾನ್ಯ ರೈತನಪ್ಪಾ, ನನ್ನ ಸಂಪಾದನೆ ನನಗೂ ನನ್ನ ಸಂಸಾರಕ್ಕೂ ಸಾಕೂಸಾಲದಷ್ಟು ತಿನ್ನಲಿಕ್ಕಷ್ಟೇ ಸರಿ ಹೋಗುತ್ತದೆ.

ನನಗೆ ಇನ್ನಿಷ್ಟು ಆದಾಯವಿರುತ್ತಿದ್ದರೆ ತಪ್ಪದೆ ನಿನಗೆ ಸಹಾಯ ಮಾಡುತ್ತಿದ್ದೆನಪ್ಪಾ. ಈಗೇನು ಮಾಡಲಿ ಹೇಳು" ಎಂದನು.

ನಾರದನು ಅದನ್ನು ಯಮಧರ್ಮನಿಗೆ ತೋರಿಸಿ "ನೋಡಿದೆಯಾ? ಹಣ ಕಣ್ಣಿಗೆ ಬಿದ್ದ ಕೂಡಲೇ, ಆದಾಯವಿದ್ದರೂ ಮಾತಿನ ಜಾಲದಲ್ಲಿ ದಾತೃತ್ವ ಪ್ರಕಟಿಸುತ್ತಾನೆ" ಎಂದನು.

"ಇವನು ಇಂತಹ ನೀಚನೆಂದು ಗೊತ್ತಾಗದೆ ಹೋಯಿತು. ತಂದು ನರಕದಲ್ಲಿ ತಳ್ಳಿಸುತ್ತೇನೆ" ಎಂದನು ಯಮಧರ್ಮ.

"ಅವಸರಬೇಡ. ಇನ್ನೂ ಸ್ಪಷ್ಟ ಪರೀಕ್ಷೆಯಾಗಲಿ. ಅವನು ಆಶಿಸುವುದನ್ನೆಲ್ಲ ಕೊಟ್ಟು ಅವನಲ್ಲಿ ಯಾವ ಬಗೆಯ ಬದಲಾವಣೆ ಬರುವುದೋ ನೋಡೋಣ" ಎಂದನು ನಾರದ.



ಅದಾದ ಮೇಲೆ ಶರಭನ ಹೊಲಗಳು ಎಲ್ಲರ ಹೊಲಗಳಿಗಿಂತಲೂ ಚೆನ್ನಾಗಿ ಫಲಿಸತೊಡಗಿದುವು. ಮುಂದೆ ನಾಲ್ಕು ವರ್ಷ ಕಳೆಯುವಷ್ಟರಲ್ಲಿ ಶರಭನು ಊರಿನ ನಡುವೆ ಅಂದವಾದೊಂದು ಮನೆಯನ್ನು ಕಟ್ಟಿಸಿದನು.

ಆಗ ಕಷ್ಟದಲ್ಲಿ ಸಿಕ್ಕಿಬಿದ್ದ ಮತ್ತೊಬ್ಬನು ಶರಭನ ಬಳಿಗೆ ಬಂದು, ತನ್ನ ಗೋಳು ಹೇಳಿಕೊಂಡು, ತನಗೇನಾದರೂ ಸಹಾಯ ಮಾಡಬೇಕೆಂದು ಕೇಳಿದನು.

ಶರಭನು ಅವನ ಮೇಲೆ ಸಹಾನುಭೂತಿಯನ್ನು ತೋರಿಸುತ್ತ, "ಈ ನಡುವೆ ನಾನು ಮನೆ ಕಟ್ಟಿಸಿ ಕುತ್ತಿಗೆಯವರೆಗೆ ಸಾಲದಲ್ಲಿ ಮುಳುಗಿದ್ದೇನೆ. ನಿನಗೆ ಹೇಗೆ ಸಹಾಯ ಮಾಡಲಾದೀತು ಹೇಳು" ಎಂದನು ಕೇಳಿದವನಿಗೆ ಮರುಮಾತಿಗೆ ಎಡೆ ಇಲ್ಲದಂತೆ.

ಮುಂದಿನ ವರ್ಷದಲ್ಲಿ ಶರಭನು ಆ ವರ್ಷ ಬಂದ ಒಳ್ಳೆಯ ಆದಾಯದಿಂದ, ಪಟ್ಟಣದಲ್ಲಿ ಚಿಕ್ಕದೊಂದು ವ್ಯಾಪಾರವನ್ನು ಮೊದಲು ಮಾಡಿದನು. ಅದು ಕೂಡಾ ಚೆನ್ನಾಗಿ ಕೂಡಿ ಬಂದಿತು. ಬಂದ ಲಾಭದಲ್ಲಿ ಸ್ವಲ್ಪ ಖರ್ಚುಮಾಡಿ, ಪಟ್ಟಣದಲ್ಲಿ ದೊಡ್ಡದೊಂದು ಉಪ್ಪರಿಗೆ ಮನೆ ಕಟ್ಟಿಸಿದ್ದಲ್ಲದೆ, ವ್ಯಾಪಾರವನ್ನು ಮತ್ತಿಷ್ಟು ವೃದ್ಧಿಪಡಿಸಿದನು. ಅವನು ಈಗ ಶರಭಯ್ಯ ನೆನಿಸಿ ಬಹು ದೊಡ್ಡ ವರ್ತಕನಾದನು.

ಕಷ್ಟದಲ್ಲಿ ಬಿದ್ದ ಮತ್ತೊಬ್ಬ ಮಧ್ಯಮ ತರಗತಿಯವನು ಶರಭಯ್ಯನ ಬಳಿಗೆ ಬಂದನು. ಶರಭಯ್ಯ ಅವನು ಹೇಳಿದುದನ್ನೆಲ್ಲಾ ಮನಸ್ಸು ಕೊಟ್ಟು ಕೇಳಿ, "ನೋಡಪ್ಪಾ, ಈ ನಡುವೆ ಪಟ್ಟಣದಲ್ಲಿ ಕಟ್ಟಿದ ಮನೆಗಾಗಿ ಮಾಡಿದ ಸಾಲದಲ್ಲಿ ನಜ್ಜು ಗುಜ್ಜಾಗಿ ಹೋಗಿ, ಇದೀಗ ಅದನ್ನೊಮ್ಮೆ ತೀರಿಸಿ ಸ್ವಲ್ಪ ನೆಮ್ಮದಿಯಾಗಿದ್ದೇನೆ. ನನ್ನ ಇಬ್ಬರು ಮಗಂದಿರನ್ನು ಓದಿಕೊಳ್ಳಲು ರಾಜಧಾನಿಗೆ ಕಳುಹಿಸಿದ್ದೇನೆ. ಬೆಳೆದು ಮುಂದೆ ಬರಬೇಕಾದ ಮಕ್ಕಳಲ್ಲವೆ? ಅವರಿಗಾಗುವ ಖರ್ಚು ತಡೆಯಲಿಕ್ಕಾಗದ ಹಾಗೆ ಬಂದಿದೆ. ಇಂತಹ ಪೇಚಾಟ ಇಲ್ಲದಿರುತ್ತಿದ್ದರೆ ನಿನಗೆ ತಪ್ಪದೆ ಸಹಾಯ ಮಾಡುತ್ತಿದ್ದೆ" ಎಂದನು.

ಆಮೇಲೆ ಶರಭಯ್ಯನು ವ್ಯಾಪಾರದಲ್ಲಿ ಭಾರೀ ಲಾಭಗಳಿಸುತ್ತ ದೊಡ್ಡ ದೊಡ್ಡ ನಾಲ್ಕು ಹಡಗುಗಳನ್ನು ಕೊಂಡುಕೊಂಡನು. ಅವುಗಳಿಂದ ವಿದೇಶ ವರ್ತಕಕ್ಕೂ ಪ್ರಾರಂಭಿಸಿದನು. ಅದರಲ್ಲಿಯೂ ಯೋಗ ಕೂಡಿ ಬಂದು ಬೇಗದಲ್ಲೇ ಕೋಟೀಶ್ವರನಾದನು. ಈಗ ಅವನು ಶರಭಯ್ಯನಾಗಿ ರಾಜ್ಯದ ಪ್ರಮುಖ ಧನವಂತರಲ್ಲಿ ಅವನೂ ಒಬ್ಬನು.

ಆ ಸಮಯದಲ್ಲಿ ಒಬ್ಬನು ಶರಭಯ್ಯನ ಸಹಾಯವನ್ನು ಕೇಳಲು ಬಂದನು. ಶರಭಯ್ಯನು ಅವನು ಹೇಳುವುದನ್ನು ಕೇಳಲಿಕ್ಕೂ ಸಮಯವಿಲ್ಲದವನಂತೆ, "ಇಕೋ ನೋಡು, ಈ ದಿನ ನನಗೆ ಅನೇಕ ಮುಖ್ಯ ಕೆಲಸಗಳಿವೆ. ಕ್ಷಣವೂ ಪುರುಸೊತ್ತಿಲ್ಲ. ನಾಳೆ ಬಂದರೆ ಏನಾದರೂ ಸಹಾಯಮಾಡೇನು" ಎಂದು ಅವನನ್ನು ಕಳುಹಿಸಿಬಿಟ್ಟನು.

ಮರುದಿನ ಅವನು ಬಹಳ ಆಶೆಯಿಂದ ಶರಭಯ್ಯನ ಬಳಿಗೆ ಬಂದನು. ಶರಭಯ್ಯ ಅವನನ್ನು ನೋಡಿದ ಕೂಡಲೇ, "ಯಾರು ನೀನು? ಏನು ಕೆಲಸ?" ಎಂದು ಕಟುವಾಗಿ ಕೇಳಿದನು.

ಬಂದವನು ಸಪ್ಪಗಾಗಿ ತಾನು ನಿನ್ನೆ ಬಂದು ಹೋದವನೆಂಬುದನ್ನು ನೆನಪುಮಾಡಿ, ತನ್ನ ದೀನ ಚರಿತ್ರೆ ಹೇಳಲು ಪ್ರಯತ್ನಮಾಡಿದನು. ಶರಭಯ್ಯ ಮಧ್ಯದಲ್ಲೇ ಅವನನ್ನು ತಡೆದು "ಈಗ ಒಂದಿಷ್ಟೂ ಪುರುಸೊತ್ತಿಲ್ಲ. ನಾನೀಗ ವರ್ತಕದ ಮೇಲೆ ವಿದೇಶಕ್ಕೆ ಹೊರಟಿದ್ದೇನೆ. ಹಿಂದಿರುಗಲು ಮೂರು ತಿಂಗಳಾಗುತ್ತದೆ. ಆಮೇಲೆ ಬಂದು ನೋಡು. ಸಹಾಯ ಮಾಡುತ್ತೇನೆ" ಎಂದನು.

ಆ ವ್ಯಕ್ತಿ ಮೂರು ತಿಂಗಳು ಸಹನೆಯಿಂದಿದ್ದು, ಒಂದು ದಿನ ಸಾಯಂಕಾಲದಲ್ಲಿ ಶರಭಯ್ಯನನ್ನು ನೋಡಲು ಬಂದನು. ಆಗ ಶರಭಯ್ಯ ಹೊಸತಾಗಿ ಬಾಗಿಲಲ್ಲಿ ಇರಿಸಿದ ಕಾವಲುಗಾರರು ಅವನು ಒಳಗೆ ಹೋಗದಂತೆ ತಡೆದು ಬಿಟ್ಟರು.

ಅವನು ರಾತ್ರಿ ಪೂರಾ ಶರಭಯ್ಯನ ಮನೆಯ ಬಾಗಿಲ ಹತ್ತಿರವೇ ಇದ್ದನು. ಮರುದಿನ ಶರಭಯ್ಯ ಹೊರಗೆ ಬಂದಾಗ, ಅವನ ಹಿಂದೆ ಮುಂದೆ ಇಕ್ಕೆಲಗಳಲ್ಲಿ ಕೂಡಾ ಇದ್ದವರು ಅವನನ್ನು ಶರಭಯ್ಯನ ಬಳಿಗೆ ಬರಲು ಬಿಡಲಿಲ್ಲ. ಶರಭಯ್ಯ ಸ್ವಲ್ಪದೂರ ನಡೆದು ಕುದುರೆಗಳ ಸಾರೋಟಿನಲ್ಲಿ ಏರಿಕೊಂಡು ಎತ್ತಲೋ ಹೋಗಿಬಿಟ್ಟನು.

"ಇನ್ನು ಪರೀಕ್ಷೆ ಸಾಕು. ನಿಜಸ್ವರೂಪ ತಿಳಿಯಿತು. ಅವನನ್ನು ಏನು ಮಾಡಬೇಕೋ ಮಾಡಯ್ಯ ಯಮಧರ್ಮ" ಎಂದನು ನಾರದ.

ಯಮಧರ್ಮರಾಜನು ಕಿಂಕರರನ್ನು ಕಳುಹಿಸಿ, ಶರಭಯ್ಯನನ್ನು ಹಿಡಿದುತರಿಸಿ ಅಸಹ್ಯವಾದ ನರಕ ಕೂಪಕ್ಕೆ ದೂಡಿಸಿದನು.






೯

[ ಚಂದ್ರವರ್ಮನು ಕಾಪಾಲಿನಿಯಿಂದ ಅಪ್ಪಣೆ ಪಡೆದು ಉತ್ತರ ದಿಕ್ಕಿಗೆ ಹೊರಟನು. ಒಂದು ಕಡೆಯಲ್ಲಿ ವಿಚಿತ್ರ ಮರದಲ್ಲಿ ಕಂಡ ಹಣ್ಣನ್ನು ಕೊಯ್ದು ತಿನ್ನಲು, ಅವನಿಗೆ ಪಶು ಪಕ್ಷ್ಯಾದಿಗಳ ಭಾಷೆಗಳು ಅರ್ಥವಾಗ ತೊಡಗಿದುವು. ಮತ್ತಿಷ್ಟು ಮುಂದೆ ಬಿಸಿನೀರಿನ ಪ್ರವಾಹವನ್ನು ನೋಡಿ, ಅದನ್ನು ದಾಟುವ ಒಂದು ಮಹಾಸರ್ಪದ ಬೆನ್ನಿನ ಮೇಲೆ ಚಂದ್ರವರ್ಮನು ಕೂಡಾ ಏರಿ ಆಚೆಗೆ ಓಡ ತೊಡಗಿದನು. —ಇನ್ನು ಓದಿರಿ ]

ನೆಸೆಯಾದ ಸರ್ಪದ ಬೆನ್ನ ಮೇಲೆ ಓಡುವಾಗ ಜಾರದಂತೆ ಬಹಳ ಎಚ್ಚರಿಕೆ ವಹಿಸಿಕೊಳ್ಳಬೇಕಿತ್ತು. ಅದು ಥಕ್ಕನೆ ತನ್ನ ಶರೀರವನ್ನು ಎಳೆದುಕೊಂಡು ಬಿಟ್ಟರೆ ತಾನು ಕುದಿಯುವ ನೀರಿಗೆ ಬಿದ್ದು ಸಾಯ ಬೇಕಾದ್ದೇ. ಸುಮಾರು ನದಿಯ ಮಧ್ಯದವರೆಗೆ ಅವನು ಹೋಗುವಷ್ಟರಲ್ಲಿ ಬಹು ಬಿಸಿಯಾದ ನದಿಯ ಆವಿ ಅವನನ್ನು ಸುತ್ತಲೂ ಮುತ್ತಿ ಅವನಿಗೆ ಉಸಿರು ಕಟ್ಟುವಂತಾಯಿತು. ತಾನು ಧರಿಸಿದ ಬಟ್ಟೆಗಳಿಗೆ ಬೆಂಕಿ ಹಿಡಿಯಿತೇನೋ ಎಂಬ ಅನುಮಾನ ಕೂಡಾ ಬಂದಿತು. ಪ್ರವಾಹದ ವೇಗಕ್ಕೆ ಏಳುವ ಕೆಲವು ಅಲೆಗಳಿಂದ ಬಿಸಿನೀರಿನ ತುಂತುರುಗಳು ಅವನ ಮೇಲೆ ಬಿದ್ದು ಬಿದ್ದು ಚುರುಗುಟ್ಟಿಸಿಕೊಂಡಿದ್ದುವು. ತಾನು ಬೋದ ತಪ್ಪಿ ನದಿಯೊಳಗೆ ಬೀಳುವೆನೇನೋ ಎಂದುಕೊಂಡನು. ಇಷ್ಟೆಲ್ಲ ಭಯಗಳ ನಡುವೆ, ಆತುರ ಉದ್ವೇಗಗಳ ನಡುವೆ ಅವನು ಮುಂದೆ ಓಡುವುದನ್ನು ಮಾತ್ರ ಬಿಡಲಿಲ್ಲ. ಅವನ ದೃಷ್ಟಿ ತನಗಿಂತ ಮುಂದೆ ಓಡುತ್ತಿರುವ ಕೋತಿಗಳ ಮೇಲೆಯೇ ಇದ್ದಿತು.

ಸ್ವಲ್ಪ ಹೊತ್ತಿಗೆ ಅವನ ಮೈಗೆ ತಾಗುವ ಬಿಸಿಗಳು ಕಡಿಮೆಯಾಗುತ್ತಾ ಬರಲು, ಕಣ್ಣಿಗೆ ನದಿಗೆ ಬದಲು



ನೆಲವಿರುವುದು ಗೊತ್ತಾಯಿತು. ಚಂದ್ರವರ್ಮನು ಒಮ್ಮೆಗೇ ನೆಲಕ್ಕೆ ಹಾರಿ ಸದ್ಯ ಬದುಕಿದೆನೆಂದು ಕೊಂಡು ಮರಗಳ ಕಡೆಗೆ ಓಡಿದನು.

ಇದೀಗ ತಾನು ಇದ್ದಕ್ಕಿದ್ದ ಹಾಗೆ ಇದಿರು ನೋಡ ದಂತೆ ಅನುಭವಿಸಿದ ಭಯಂಕರ ಅನುಭವಗಳಿಂದ ಬದುಕಿ ಉಳಿದುದನ್ನು ನೆನೆದು ಚಂದ್ರವರ್ಮನು ಆಪಾದ ಮಸ್ತಕದ ಪರ್ಯಂತ ನಡುಗಿದನು. ಅವನು ಆ ದೊಡ್ಡ ಮರದಕಾಂಡಕ್ಕೆ ಒರಗಿ ಹಾಗೆಯೇ ಕುಳಿತು ಆಯಾಸಪಡುತ್ತ, ಆ ಮಹಾಸರ್ಪದ ಕಡೆಗೆ ನೋಡಿದನು. ಅದರ ಪೂರ್ತಿ ಶರೀರ ಇನ್ನೂ ನದಿ ಯನ್ನು ದಾಟಿ ಮುಗಿಯಲಿಲ್ಲ. ತನ್ನ ಬೆನ್ನಿನ ಮೇಲೆ ಹಾರಿಹಾರಿ ಓಡುವ ಕೋತಿಗಳದೋ, ಚಂದ್ರ ವರ್ಮನದೋ ಲಕ್ಷ್ಯ ಅದಕ್ಕಿದ್ದಂತೆ ಕಾಣಲಿಲ್ಲ. ಹತ್ತು ಹನ್ನೆರಡು ಅಡಿ ವ್ಯಾಸವಿರುವ ಅದರ ಕಪ್ಪಗಿನ ತಲೆ, ಮರಗಳಾಚೆಗೆ ಹೋಗುತ್ತಾ ಕಾಣು ತಿತ್ತು. ಕೆಂಪಗೆ ಬೆಂಕಿಯ ಕಣಗಳಂತಹ ಅದರ ಎರಡು ಕಣ್ಣುಗಳನ್ನು ನೋಡಿ ಚಂದ್ರವರ್ಮನು ಗಡಗಡನೆ ನಡುಗಿದನು. ಒಂದು ವೇಳೆ ಅದರ ದೃಷ್ಟಿ ತನ್ನ ಮೇಲೆ ಬಿದ್ದುಗಿದ್ದು ಬಿಟ್ಟರೆ ಅದು ಹಗೆ ಹಿಡಿದು ತನ್ನ ಪ್ರಾಣವನ್ನು ಬಲಿ ತೆಗೆದುಕೊಳ್ಳದೆ ಬಿಡಲಾರದೆಂದು ಅವನಿಗೆ ತೋರಿತು. ಆದರೆ ಅದೃಷ್ಟವಶಾತ್ ಆ ಸರ್ಪವು ತನ್ನ ತಲೆಯನ್ನು ಚಂದ್ರವರ್ಮನಿರುವ ಕಡೆಗೆ ತಿರುಗಿಸಲಿಲ್ಲ. ನೋಡು ತ್ತಿದ್ದ ಹಾಗೆ ಅದರ ತಲೆ ಮರಗಳಾಚೆಗೆ ಮರೆಯಾಗಿ ಹೋಯಿತು. ಅದರ ಶರೀರದ ಭಾಗವು ಮಾತ್ರ ಸರಸರನೆ ಶಬ್ದಮಾಡುತ್ತ, ಕಲ್ಲುಗಳನ್ನು ಆಚೀಚೆ ಹೊರಳಿಸುತ್ತ ಇನ್ನೂ ಹೋಗುತ್ತಲೇ ಇದ್ದಿತು. ಅದು ಹಾಗೆ ಎಲ್ಲಿಗೆ ಹೋಗುತ್ತದೋ ?

ಇನ್ನು ಮೇಲೆ ಆ ಸರ್ಪದ ದೃಷ್ಟಿ ತನ್ನ ಮೇಲೆ ಹೊರಳುವಂತಿಲ್ಲ ಎಂಬುದನ್ನು ನಿಶ್ಚಯ ಮಾಡಿ ಕೊಂಡ ಮೇಲೆ ಚಂದ್ರವರ್ಮನು ಧೈರ್ಯದಿಂದ ಎದ್ದು ಮುಂದಕ್ಕೆ ಹೋಗಿ, ತಾಳೆಯ ಮರದ ಹಾಗಿ ರುವ ಅದರ ಶರೀರವನ್ನು ಪರೀಕ್ಷಿಸಿ ನೋಡ ತೊಡಗಿದನು. ಅದರ ಶರೀರವು ಎಣ್ಣೆ ಸವರಿ ಕೊಂಡ ಹಾಗೆ ತಳತಳಿಸಿಕೊಂಡಿತ್ತು. ಶರೀರಕ್ಕೆ ಕವಚದ ಹಾಗೆ ಅಂಗೈಯಷ್ಟು ದಪ್ಪವಾದ ಪೊರೆ ಗಳಿದ್ದುವು. ಬಹುಶಃ ತಾನು ಕತ್ತಿಯಿಂದ ಬಲವಾಗಿ ತಿವಿದರೂ ಕತ್ತಿಯು ಮೊನೆ ಮುರಿದೀತೇ ಹೊರತು ಸರ್ಪದ ಶರೀರದೊಳಗೆ ಇಳಿಯಲಾರದೆಂದು ಅವನಿಗೆ ತೋರಿತು. ಸಾಹಸಿಯಾದ ಚಂದ್ರವರ್ಮನಿಗೆ ಆ ಕ್ಷಣದಲ್ಲಿ ಅದರ ಶರೀರವನ್ನು ತಿವಿದು ನೋಡ ಬೇಕೆಂದೇ ತೋರಿತು. ಚಂದ್ರವರ್ಮನು ಒರೆಯಿಂದ ಕತ್ತಿಯನ್ನು ಎಳೆದುಕೊಂಡು ಸರ್ಪದ ಶರೀರದ ಮೇಲೆ ಬಲವಾದ ಒಂದೇಟು ಹಾಕಿದನು. ಯಾವುದೋ ಬಂಡೆಯ ಮೇಲೆ ಹೊಡೆದಂತೆ ಖಂಗೆಂಬ ಶಬ್ದ ವಾಯಿತೇ ಹೊರತು ಸರ್ಪಕ್ಕೆ ಅವನ ಪೆಟ್ಟು ಇರುವೆ ಕಚ್ಚಿದಂತೆಯೂ ಅನಿಸಲಿಲ್ಲ.




ಚಂದ್ರವರ್ಮನು ಅತ್ಯಂತ ಆಶ್ಚರ್ಯಪಡುತ್ತ ಸುತ್ತಲೂ ನೋಡಿದನು. ಫಲಭಾರದಿಂದ ಬಾಗಿರುವ ಮರಗಳನ್ನು ನೋಡಿ, ಅವನಿಗೆ ತನ್ನ ಹಸಿವೆಯ ಸಂಗತಿ ನೆನಪಿಗೆ ಬಂತು. ಕೂಡಲೇ ಅವನು ಕತ್ತಿಯನ್ನು ಒರೆಗೇರಿಸಿ, ಸಮೀಪದಲ್ಲಿದ್ದ ಒಂದು ಮರದ ಮೇಲಕ್ಕೆ ಸರಸರನೆ ಏರಿದನು. ಅದು ಮಾವಿನಮರವಾಗಿತ್ತು. ಅವನು ಕೊಂಬೆಯಿಂದ ಮಾವಿನ ಹಣ್ಣನ್ನು ಕೊಯಿದು ಬಾಯಿಯಲ್ಲಿ ಹಿಡಿದುಕೊಳ್ಳುವಷ್ಟರಲ್ಲಿ ಹೆದರಿಸುವ ಹಾಗೆ ಆನೆಯ ಘೀಂಕಾರವೊಂದು ಕೇಳಿಸಿತು. ಈ ಮರದ ಒಡೆಯನು ಆನೆಯೇನೋ ಎಂದುಕೊಂಡು ಚಂದ್ರವರ್ಮನು ಆ ಧ್ವನಿ ಬರುವ ಕಡೆಗೆ ನೋಡಿದನು.

ಅವನ ದೃಷ್ಟಿಗೆ ಆನೆ ಎಲ್ಲಿಯೂ ಕಾಣಲಿಲ್ಲ. ಸ್ವಲ್ಪದೂರದಲ್ಲಿ ಗಿಡಮರಬಳ್ಳಿ ಪೊದರುಗಳೆಲ್ಲ ಗಾಳಿಯ ಹೊಡೆತಕ್ಕೆ ಅಲ್ಲಾಡಿಕೊಂಡಿರುವುದನ್ನು ನೋಡಿದನು. ಅದೇ ಹೊತ್ತಿಗೆ ಮತ್ತೆ ಕೆಲವು ಆನೆಗಳು ಘೀಂಕಾರ ಧ್ವನಿ ಮಾಡುತ್ತ ದೊಡ್ಡ ದೊಡ್ಡ ಕೊಂಬೆಗಳನ್ನು ತಟಪಟನೆ ಮುರಿಯುವ ಶಬ್ದಗಳು ಮೇಲಿಂದ ಮೇಲೆ ಹೊರಡ ತೊಡಗಿದುವು. ಆನೆಗಳಿಗೆ ಅಷ್ಟು ಸಿಟ್ಟು ಬರಲು ಕಾರಣವೇನಿರಬಹುದು?

ಚಂದ್ರವರ್ಮನು ಬೇಗಬೇಗನೆ ಕಚ್ಚಿದ ಹಣ್ಣನ್ನು ಪೂರ್ತಿ ತಿಂದು ಮುಗಿಸಿ ಕೈಗಳನ್ನು ಎಲೆಗಳಿಗೆ ಒರೆಸಿಕೊಳ್ಳುತ್ತ, ತಾನಿರುವ ಮರದ ಕೊಂಬೆಯಿಂದ ಬೇಗಬೇಗನೆ ಮೇಲೆ ಮೇಲಿನ ಕೊಂಬೆಗಳನ್ನು ಏರುತ್ತಾ, ಕೊಟ್ಟಕೊನೆಯ ಕೊಂಬೆಗೆ ಹತ್ತಿ ಆ ಶಬ್ದಗಳು ಬರುವ ಕಡೆಗೆ ತಲೆ ತಿರುಗಿಸಿದನು. ಅಲ್ಲಿ ಅವನು ನೋಡಿದ ದೃಶ್ಯವು ಎಂತಹ ಧೈರ್ಯಶಾಲಿಗಾದರೂ ಎದೆ ನಡುಗಿಸುವಂತಿದ್ದಿತು.

ಬಿಸಿನೀರಿನ ಪ್ರವಾಹವನ್ನು ದಾಟಿಬಂದ ಆ ಮಹಾಸರ್ಪವು ಒಂದು ಆನೆಯನ್ನು ತನ್ನ ಶರೀರದಿಂದ ಸುತ್ತಿ ಹಾಕಿ ಆನೆಯ ತಲೆಯನ್ನು ಬಾಯಿಯೊಳಗೆ ಅಮುಕಿಕೊಳ್ಳಲು ಹೆಣಗುತಿದ್ದಿತು. ಪ್ರಾಣಾಪಾಯದ ಸ್ಥಿತಿಯಲ್ಲಿರುವ ಆನೆ ಸರ್ಪದ ಬಾಯಿಗೆ ಸಿಗದಂತೆ ತನ್ನ ತಲೆಯನ್ನು ಆಡಿಸಿಕೊಂಡು ಘೀಂಕಾರ ಮಾಡುತ್ತ ಸೊಂಡಿಲಿನಿಂದ ಆ ಸರ್ಪವನ್ನು ಹೊಡೆಯುತ್ತ ನಾನಾಬೀಭತ್ಸ ಮಾಡಿಕೊಂಡಿತ್ತು. ಅದು ಗುಂಪಿನ ಸಲಗವಾಗಿರಬೇಕು. ಉಳಿದ ಆನೆಗಳು ತಮ್ಮ ಕೋಪವನ್ನು ಸರ್ಪದ ಮೇಲೆ ತೋರಿಸುವುದಕ್ಕೆ ಬದಲು ಸುತ್ತುಮುತ್ತಲಿನ ಮರಗಳ ಮೇಲೆ ತೋರಿಸುತ್ತಿವೆ. ಆದರ ಸುತ್ತಲೂ ಇರುವ ಇನ್ನೂ ಕೆಲವು ಆನೆಗಳು ಭೀತಿಯಿಂದ ಕಿವಿಗಡಚಿಕ್ಕುವಂತೆ ಕರ್ಕಶವಾಗಿ ಘೀಂಕೃತಿಗಳನ್ನು ಮಾಡುತ್ತ, ಸೊಂಡಿಲುಗಳನ್ನು ಆಕಾಶದ ಕಡೆಗೆತ್ತಿ ಅತ್ತಲೂ ಇತ್ತಲೂ ಅರ್ಥವಿಲ್ಲದೆ ಹಿಡುತ್ತ ಸಿಕ್ಕಿದ ಮರಮಟ್ಟುಗಳನ್ನು ಕೆಡವುತ್ತಿದ್ದುವು. ಅವುಗಳ ಶರೀರದ ತಾಕಲಾಟದಿಂದ ಆಲಿವಾಲಿ ಬೀಳುವ ಮರಗಳ ಶಬ್ದವು ಲಟಪಟ ಎಂಬ ಭಯಂಕರ ಬಿರುಗಾಳಿಯಂತಾಯಿತು.

ಮಹಾ ಸರ್ಪವು ಮಾತ್ರ ತನ್ನ ಸುತ್ತಲೂ ನಡೆಯುವ ಆ ಘೋರಗಳಾವುದನ್ನೂ ಗಮನಿಸಿದಂತೆ ಕಾಣಲಿಲ್ಲ. ಅದು ತನ್ನ ಶರೀರವನ್ನು ಇನ್ನಿಷ್ಟು ಬಿಗಿಯಾಗಿ ಆನೆಯ ಶರೀರವನ್ನು ಸುತ್ತಿ ಅಪ್ಪಚ್ಚಿ ಮಾಡುವಾಗ, ಆನೆಯ ಬಾಯಿಯಿಂದ ಅದರ ಕರುಳು ಹೊರಗೆ ಬರಲು, ಅದರ ತಲೆಯಾಡಿಕೆ ನಿಂತಿತು. ಸರ್ಪವು ತನ್ನ ಗುಹೆಯಂತಹ ಬಾಯಿಯೊಳಗೆ ಆನೆಯ ತಲೆಯನ್ನು ಹಾಕಿಕೊಂಡಿತು. ಮತ್ತೇನಿದೆ ? ಅಷ್ಟು ದೊಡ್ಡ ಆನೆಯ ಶರೀರವು ಮೆಲ್ಲಮೆಲ್ಲನೆ ಸರ್ಪದ ಶರೀರದೊಳಗೆ ಹೋಗ ತೊಡಗಿತು.

"ಓ! ಪರಮೇಶ್ವರಾ! ನಾನು ಯಾವುದೋ ಮತ್ತೊಂದು ಭಯಂಕರವಾದ ಲೋಕದೊಳಗೆ ಕಾಲಿಟ್ಟುಬಿಟ್ಟೆನು. ಇಲ್ಲಿ ಹೆಜ್ಜೆ ಹೆಜ್ಜೆಗೂ ಜೀವಕ್ಕೆ ಅಪಾಯವೆಂದು ಕಾಣುತ್ತದೆ. ಇನ್ನು ನೀನೇ ನನಗೆ ಗತಿ!" ಎಂದು ಮನಸ್ಸಿನಲ್ಲೇ ಅಂದುಕೊಂಡನು ಚಂದ್ರವರ್ಮ. ಆ ಬಿಸಿ ನೀರಿನ ನದಿಯ ಈ ಅಡವಿ ಪ್ರಾಂತದೊಂದಿಗೆ ಹೋಲಿಸಿದರೆ, ಕಾಪಾಲಿನಿ ಇದ್ದ ಅಡವಿ ಪ್ರಾಂತವು ರಮಣೀಯವಾದ ಉದ್ಯಾನವೆಂದೇ ಹೇಳಬೇಕು. ಇನ್ನು ತಾನು ಅನೇಕ ಯೋಜನಗಳಷ್ಟು ದೂರ ನಡೆದು ಶಂಖ ಮಾಂತ್ರಿಕನಿರುವ ಗೃಹವನ್ನು ತಲುಪಬೇಕಾಗಿದೆ. ಆದರೆ ಈ ಸ್ವಲ್ಪ ಮಾತ್ರ ದೂರದ ಪ್ರಯಾಣದಲ್ಲೇ ತನಗೆ ಇದಿರಾದ ವಿಚಿತ್ರ ಅನುಭವಗಳಿಂದ ಚಂದ್ರವರ್ಮನಿಗೆ ವಿಪರೀತ ದಿಗಿಲಾಯಿತು. ತನಗೆ ಏನಾದರೂ ಅಮಾನುಷ ಶಕ್ತಿಗಳ ಸಹಾಯವಿದ್ದ ಹೊರತು, ಈ ಭಯಂಕರವಾದ ಅರಣ್ಯದಲ್ಲಿಯ ಯಾವ ಕಣಿವೆಯೊಳಗೋ ತನ್ನ ಸಮಾಧಿಯಾಗುವುದೇ ನಿಜವೆಂದು ಅವನಿಗೆ ತೋರಿತು. ತನಗಿರುವ ವಿಶೇಷ ಶಕ್ತಿಯಾದ ಪಶು ಪಕ್ಷಿಗಳ ಭಾಷಾ ಜ್ಞಾನವು ಈ ಘೋರವಾದ ಕಾಡಿನಲ್ಲಿ ಯಾವ ಪ್ರಯೋಜನಕ್ಕೂ ಬಾರದೆನಿಸಿತು.

ಈ ಬಗೆಯ ಕೆಟ್ಟ ಊಹನೆಗಳಿಂದ ಚಂದ್ರವರ್ಮನು ತನ್ನ ಧೈರ್ಯ ಸಾಹಸಗಳನ್ನು ಕಳೆದುಕೊಂಡು, ಇಳಿಯಲಿಕ್ಕೂ ತ್ರಾಣವಿಲ್ಲದವನಂತೆ, ಆ ಮರದ ಕೊಂಬೆಯಲ್ಲಿಯೇ ಅಪ್ಪಿದ ಹಾಗೆ



ಗಟ್ಟಿ ಕುಳಿತು ಕಣ್ಣು ಮುಚ್ಚಿಕೊಂಡನು. ಇನ್ನಷ್ಟು ಹಣ್ಣುಗಳನ್ನು ತಿನ್ನಬೇಕೆಂಬ ಆಸೆ ಅಡಿಗುಂಟಿತು. ಆಗ ಅವನಿಗೆ ಹಸಿವೆಯೇ ಗೊತ್ತಾಗಲಿಲ್ಲ. ತಾನು ನೆರವೇರಿಸುವೆನೆಂದು ಹೊರಟ ಕಾರ್ಯವು ಎಂತಹ ದುಸ್ಸಾಧ್ಯವಾದುದೆಂದು ಈಗ ತಿಳಿಯಿತು. ಇನ್ನು ತಾನು ಆ ಕಾಪಾಲಿನಿ ಮಾಂತ್ರಿಕಳನ್ನೂ, ಶಂಖ ಮಾಂತ್ರಿಕನನ್ನೂ ಅವರವರ ಕರ್ಮಕ್ಕೆ ಹೇಗಾದರೂ ಹೋಗಲೆಂದು ಬಿಟ್ಟು, ತಾನು ಎತ್ತಾದರೂ ಹೋಗಿ ಬಿಡುವುದೇ ಒಳ್ಳೆಯದೆಂದುಕೊಂಡನು. ಮರು ಕ್ಷಣದಲ್ಲಿ ಯಾವ ದಿಕ್ಕಿಗೆ ಹೋಗುವುದೆಂಬ ಪ್ರಶ್ನೆ ಭೂತಾಕಾರವಾಗಿ ಎದ್ದಿತು. ಹಿಂದಿರುಗಿ ಓಡೋಣವೆಂದರೆ ಆ ಕುದಿಯುವ ನದಿ...?

ಕ್ರಮವಾಗಿ ಚಂದ್ರವರ್ಮನು ತೂಕಡಿಸಿ ತಂದ್ರಾವಸ್ಥೆಗೆ ಜಾರಿಕೊಂಡನು. ಸೂರ್ಯನು ಅಸ್ತಮಿಸಿ ಕತ್ತಲೆ ಬಂದುದಾಗಲೀ, ತಮ್ಮ ತಮ್ಮ ಗೂಡು ಗುಹೆಗಳಿಗೆ ಸೇರುವ ಪಶುಪಕ್ಷ್ಯಾದಿಗಳು ಮಾಡುವ ಕಲಕಲರವವಾಗಲೀ, ಅವನಿಗೆ ಕೇಳಿಸಲಿಲ್ಲ. ಆಕಾಶದಲ್ಲಿ ಮಿನುಗುವ ಚುಕ್ಕೆಗಳ ಹೊರತು ಚಂದ್ರನಿರಲಿಲ್ಲ. ಗಾಳಿ ಪೂರ್ತಿಯಾಗಿ ಸ್ತಂಭಿಸಿಹೋದ ಹಾಗಿದ್ದಿತು. ಚಂದ್ರವರ್ಮನು ಕುಳಿತ ಕೊಂಬೆಯನ್ನು ಅಪ್ಪಿಕೊಂಡು ಗಾಢ ನಿದ್ರೆಯಲ್ಲಿದ್ದನು.

ಹೀಗೆ ರಾತ್ರಿಯಾಗಿ ಹೊತ್ತು ಕ್ರಮಿಸುತ್ತಾ ನಡುರಾತ್ರಿಯ ಹೊತ್ತಿನಲ್ಲಿ ಚಂದ್ರವರ್ಮನ ಶರೀರವನ್ನು ಝುಂಝಾ ಮಾರುತವು ತಾಗಿದಂತಾಗಿ ಎಚ್ಚರಾಯಿತು. ಕಣ್ಣು ತೆರೆಯುವಾಗ ಅವನ ಶರೀರವು ಮರದ ಕೊಂಬೆಯಲ್ಲಿರಲಿಲ್ಲ. ಯಾವುದೋ ಗಾಳಿ ತನ್ನನ್ನು ಆಕಾಶದಲ್ಲಿ ಹಾರಿಸಿಕೊಂಡು ಹೋಗುತ್ತಿದೆ ಎಂದು ತಿಳಿದನು. "ನನ್ನ ನೂರಾಯುಸ್ಸು ಇಲ್ಲಿಗೆ ಮುಗಿಯಿತು! ಈಗ ಯಾವ ಲೋಕಕ್ಕೋ ಹೋಗುತ್ತಿದ್ದೇನೆ." ಎಂದುಕೊಂಡನು ಚಂದ್ರವರ್ಮ.

ಹಾಗೆ ಅಂದುಕೊಳ್ಳುವಾಗಲೇ ಕಂಬಳಿ ಮುಳ್ಳಿನಂತೆ ಚುಚ್ಚಿಕೊಳ್ಳುತ್ತಿರುವ ಒಂದು ಸ್ಥಳದ ಮೇಲೆ ಧೊಪ್ಪನೆ ಅಂಗಾತ ಬಿದ್ದನು. "ಓಹ್! ಕಲ್ಲಿನ ಮೇಲೆ ಬೀಳಲಿಲ್ಲ. ಬದುಕುವ ಹಾಗೆ ಬಿದ್ದೆನು!"





ಎಂದುಕೊಳ್ಳುತ್ತ ಚಂದ್ರವರ್ಮನು ಏಳಲು ನೋಡುವಾಗ ತಾನಿರುವ ಪ್ರದೇಶವು ಅತ್ತಿತ್ತ ಕದಲಲಾಗದಂತಿರುವುದು ತಿಳಿಯಿತು. ಅವನು ಆಶ್ಚರ್ಯಪಡುತ್ತ ಪಕ್ಕದಲ್ಲಿ ನೋಡಿದನು. ಯಾವುದೋ ಹುಲ್ಲುಗಳ ರಾಶಿಯ ನಡುವೆ ತಾನಿದ್ದೇನೆಂದುಕೊಂಡನು. ಕಣ್ಣನ್ನು ಮರೆಸುವ ಉದ್ದುದ್ದವಾದ ಹುಲ್ಲನ್ನು ಕೈಗಳಿಂದ ಸರಿಸಲು ಪ್ರಯತ್ನಿಸುವಾಗ, ಪಕ್ಷಿಯೊಂದು ಮಾತಾಡುವುದು ಕೇಳಿಸಿತು.

"ನಾವು ಈ ರಾತ್ರಿ ತುಂಬಾ ಸುತ್ತಾಡಿದೆವು. ಇನ್ನು ಇಲ್ಲಿಯೇ ಕಾಲ ಕಳೆಯುವುದು ಒಳ್ಳೇದು. ಹತ್ತಿರದಲ್ಲಿರುವ ಬಿಸಿ ನೀರಿನ ಪ್ರವಾಹದಿಂದ ಬರುವ ಗಾಳಿ ನನಗೆ ಬಹಳ ಹಿತವಾಗಿ ಆನಂದದಾಯಕವಾಗಿದೆ. ನೀನೇನು ಹೇಳುವಿ ಭೇರುಂಡಾ" ಎಂದಿತು ಪಕ್ಷಿ.

ಅದಕ್ಕೆ ಉತ್ತರವಾಗಿ ಸಮೀಪದಲ್ಲಿದ್ದ ಇನ್ನೊಂದು ಪಕ್ಷಿ ಹೌದೆಂದು ಹೇಳಿದ ಮಾತು ಕೂಡಾ ಕೇಳಿಸಿತು. ಇಷ್ಟು ಕೇಳಿದ ಕೂಡಲೇ ಚಂದ್ರವರ್ಮನಿಗೆ ತಾನು ಎಲ್ಲಿರುವೆನೆಂಬುದು ಅರ್ಥವಾಗಿಬಿಟ್ಟಿತು. ತಾನು ನಿದ್ರಿಸುತ್ತಿದ್ದಾಗ ಎರಡು ಗಂಡಭೇರುಂಡ ಪಕ್ಷಿಗಳು, ತಾನಿದ್ದ ಮರದ ಹತ್ತಿರವೇ ಬಂದಿವೆ. ಅವುಗಳ ರೆಕ್ಕೆಗಳಿಂದೆದ್ದ ಗಾಳಿ ತನ್ನನ್ನು ಮರದ ಕೊಂಬೆಯಿಂದ ಎಗರಿಸಿ, ಸ್ವಲ್ಪ ದೂರದವರೆಗೆ ಹಾರಿಸಿ, ಯಾವ ಕಲ್ಲುಗಳ ಮೇಲೆಯೋ ಬೀಳದೆ ಅದೃಷ್ಟವಶಾತ್ ಒಂದು ಗಂಡಭೇರುಂಡದ ಬೆನ್ನಿನ ಮೇಲೆಯೇ ಬಿದ್ದಿದ್ದೇನೆಂದು ಅರ್ಥಮಾಡಿಕೊಂಡನು.

ಆನೆಯಷ್ಟು ಪ್ರಮಾಣದಲ್ಲಿರುವ ಆ ಪಕ್ಷಿಗೆ ತಾನು ಒಂದು ಇರುವೆಯೋ ಸೊಳ್ಳೆಯೋ ಆಗಿ ತೋರಿರಬೇಕು. ಇನ್ನು ಮೇಲೆ ತಾನು ಆ ಪಕ್ಷಿಯ ಕಣ್ಣಿಗೆ ಬೀಳುವುದಕ್ಕೆ ಮೊದಲೇ ಅಲ್ಲಿಂದ ಹೇಗಾದರೂ ಕೆಳಗಿಳಿದು ಓಡಿಬಿಡುವುದು ಒಳ್ಳೆಯದೆಂದುಕೊಂಡನು ಚಂದ್ರವರ್ಮ.

ಅಂತೆಯೇ ಅವನು ಆ ಪಕ್ಷಿಯ ಗರಿಗಳ ಸಂದಿನಿಂದ ತನ್ನನ್ನು ಜಾರಿಸಿಕೊಂಡು ಕೆಳಗಿಳಿಯಲು ಪ್ರಯತ್ನಿಸ ತೊಡಗಿದನು. ಆಗ ಆಕಾಶದಲ್ಲಿ ಯಾವುದೋ ಥಳ್ಳನೆ ಹೊಳೆಯಿತು. ಚಂದ್ರವರ್ಮನು ತಲೆಯೆತ್ತಿ ಮೇಲೆ ನೋಡಿದನು. ಆಕಾಶದಲ್ಲಿ ಧಗಧಗನೆ ಉರಿದುಕೊಂಡು ಕಾಂತಿಗಳನ್ನು ಹೊರಚೆಲ್ಲುತ್ತ ಒಂದು ಪಕ್ಷಿ ರಿವ್ವನೆ ತಾನಿರುವ ಕಡೆಗೆ ಬಂದಿಳಿಯುವುದನ್ನು ನೋಡಿದನು.

ಆ ಕ್ಷಣದಲ್ಲಿ ಅವನಿಗೆ ಕಾಪಾಲಿನಿ ಮಾಂತ್ರಿಕಳು ಹೇಳಿದ ಅಗ್ನಿ ಪಕ್ಷಿಯ ಸಂಗತಿ ನೆನಪಿಗೆ ಬಂದಿತು. ಅದು ಮಹಾಮಾಂತ್ರಿಕ ಶಂಖನ ಅಗ್ನಿಪಕ್ಷಿಯಾಗಿರಬಹುದೆ? ಚಂದ್ರವರ್ಮನು ಜಾರುವುದನ್ನು ಬಿಟ್ಟು ಅಲ್ಲಿಯೇ ಅಡಗಿಕೊಂಡನು.

ಅಗ್ನಿಪಕ್ಷಿ ಕೆಳಗಿಳಿಯುವುದನ್ನು ನೋಡಿದ ಕೂಡಲೇ ಗಂಡಭೇರುಂಡ ಪಕ್ಷಿಗಳು ಅದಕ್ಕೆ



ಸುಸ್ವಾಗತ ಹೇಳುವಂತೆ ತಮ್ಮ ಮೂಗುಗಳನ್ನು ಮೇಲೆತ್ತಿ, "ಓ! ಅಗ್ನಿಪಕ್ಷೀ! ಏನು ಹೀಗೆ ಬಂದೆಯಲ್ಲಾ ?" ಎಂದು ತಲೆಯಾಡಿಸಿದುವು. ಅಗ್ನಿಪಕ್ಷಿ ನೆಟ್ಟಗೆ ಕೆಳಗೆ ಬಂದು, "ಇಲ್ಲಿರುವಿರಾ ? ನಿಮ್ಮನ್ನೇ ನಾನು ಬಹಳ ಹೊತ್ತಿನಿಂದ ಹುಡುಕುತ್ತಾ ಇದ್ದೆನು" ಎಂದಿತು.

"ಹಾಗೇನು? ಅದೇನು ಕೆಲಸ ನಮ್ಮೊಂದಿಗೆ ?" ಎಂದು ಕೇಳಿತು ಒಂದು ಗಂಡಭೇರುಂಡ.

ಅಗ್ನಿಪಕ್ಷಿ ನೆಲದ ಮೇಲಿಳಿದು, ಕೊಕ್ಕಿನಿಂದ ರೆಕ್ಕೆಗಳನ್ನೊಮ್ಮೆ ನೀವಿಕೊಂಡು, "ನನ್ನ ಒಡೆಯನಾದ ಶಂಖನು ನನಗೊಂದು ಕೆಲಸ ಹೇಳಿದ್ದಾನೆ. ಅದೊಂದು ದೊಡ್ಡ ಕಷ್ಟವಾದ ಕೆಲಸವೇನಲ್ಲ. ಜರೆಯ ಭಾರದಿಂದ ಸೊರಗಿ ಹೋದ ಒಬ್ಬಳು ಮಾಂತ್ರಿಕಳನ್ನು ತನ್ನ ಬಳಿಗೆ ತರಬೇಕೆಂದು ಹೇಳಿದ್ದಾನೆ. ಆದರೆ ಆ ಕೆಲಸ ನನ್ನಿಂದ ಸಾಧ್ಯವಾಗುವಂತಹುದು ಮಾತ್ರ ಅಲ್ಲ. ನಾನು ಹಗಲು ಹೊತ್ತಿನಲ್ಲಿ ನೋಡಲಾರೆನಷ್ಟೆ ? ರಾತ್ರಿಯಲ್ಲಿ ನನ್ನ ಬೆಳಕನ್ನು ನೋಡಿದ ಕೂಡಲೆ ಆ ಮಾಂತ್ರಿಕ ಮುದುಕಿ ನನ್ನನ್ನು ಕಂಡು ಹಿಡಿದು ಜಾಗರೂಕಳಾಗಿ ಬಿಡುತ್ತಾಳೆ. ಆದುದರಿಂದ ನೀವು ಸಪ್ಪಳಿಲ್ಲದೆ ಹೋಗಿ ಈ ರಾತ್ರಿಯಲ್ಲೇ ಆ ಮಂತ್ರವಾದಿನಿಯನ್ನು ನಿಮ್ಮ ಕೊಕ್ಕಿನಲ್ಲಿ ಕಚ್ಚಿಕೊಂಡು ನನ್ನ ಯಜಮಾನನ ಹತ್ತಿರ ತಂದು ಬಿಟ್ಟರೆಂದರೆ ನಿಮಗೆ ನಾನು ಎಂದೆಂದಿಗೂ ಕೃತಜ್ಞಳಾಗಿರುತ್ತೇನೆ ದಯವಿಟ್ಟು ಇದೊಂದು ಉಪಕಾರ ಮಾಡುವಿರಾ ? ಮಾಡಿದರೆ ನಿಮಗೆ ಇದೊಂದು ಕಸ ಎತ್ತಿ ಹಾಕಿದಷ್ಟು ಸುಲಭದ ಕೆಲಸ" ಎಂದಿತು.

ಆ ಮಾತುಗಳನ್ನು ಕೇಳಿ ಗಂಡಭೇರುಂಡಗಳು ಉಸ್ಸುರುಸ್ಸುರೆಂದು ಶ್ವಾಸಬಿಟ್ಟುವು, "ನಾವಿನ್ನು ಈ ರಾತ್ರಿಯಲ್ಲಿ ಒಂದು ಯೋಜನ ಕೂಡಾ ಹಾರಲಾರೆವಪ್ಪ. ಸೂರ್ಯನು ಮುಳುಗಿದ ಹೊತ್ತಿನಿಂದ ಈಗಿನವರೆಗೂ ಸಮುದ್ರದೊಳಗಿನ ಎಷ್ಟೋ ದ್ವೀಪಗಳಲ್ಲಿ ತಿರುಗಿ ಹೊಟ್ಟೆ ತುಂಬಿಸಿಕೊಂಡು, ರೆಕ್ಕೆಗಳ ನೋವನ್ನು ಕಳೆದುಕೊಳ್ಳಲಿಕ್ಕೆ ಈ ಉಷ್ಣ ಪ್ರವಾಹದ ಗಾಳಿಗೆ ಮೈಯೊಡ್ಡಿ ಸ್ವಲ್ಪ ಹೊತ್ತು ಮಲಗ ಬೇಕೆಂದಿದ್ದೇವೆ. ಬೇಕಾದರೆ ನಾಳೆ ರಾತ್ರಿ ನೀನು ಹೇಳಿದ ಸಹಾಯ ಮಾಡಬಹುದು. ಒಂದು ದಿನ ತಡವಾದರೆ ನಿನ್ನ ಯಜಮಾನನಿಗೇನೂ ಕೊಂಪೆ ಮುಳುಗಲಾರದಷ್ಟೆ ?" ಎಂದುವು.

ಅಗ್ನಿಪಕ್ಷಿ ಸಂತೋಷದಿಂದ ರೆಕ್ಕೆಗಳನ್ನು ದಪದಪನೆ ಕುಣಿಸಿ, ಆ ಪ್ರಾಂತವೆಲ್ಲಾ ಮಾರ್ಮೊಳಗುವಂತೆ ದೊಡ್ಡದೊಂದು ಕೇಕೇ ಹಾಕಿ ಹೇಳಿತು :

"ಮುಖ್ಯವಾದ ಸಂಗತಿ ಹೇಳುತ್ತೇನೆ. ಹಚ್ಚ ಹಗಲಿನಲ್ಲಿ ಆ ಮಾಂತ್ರಿಕ ಮುದುಕಿಯನ್ನು ಹಿಡಿದುಕೊಳ್ಳುವುದು ಸಾಧ್ಯವಾಗುವ ಕೆಲಸವಲ್ಲ. ಅವಳು ಬಹುದೊಡ್ಡ ತಂತ್ರಗಾರಿಣಿ. ಮಹಾಬುದ್ಧಿವಂತೆ. ಅದೆಲ್ಲದರ ಮೇಲೆ ಅವಳಿಗೆ ಅತ್ಯಂತ ಬಲಿಷ್ಠರಾದ

ಸೇವಕರಿದ್ದಾರೆ. ಎಷ್ಟೋ ವರ್ಷಗಳಿಂದ ಆ ಮಾಂತ್ರಿಕಳು ರಾತ್ರಿಯ ಹೊತ್ತಿನಲ್ಲಿ ಕೂಡಾ ತೂಕಡಿಸದೆ, ಕಣ್ಣುಮುಚ್ಚದೆ ಪಿಳಿಪಿಳಿ ಕಣ್ಣು ತೆರೆದುಕೊಂಡೇ ಬದುಕಿಕೊಂಡಿದ್ದಾಳೆ. ಇತ್ತೀಚೆಗೆ ಮಾತ್ರ ಅವಳ ದೇಹಾರೋಗ್ಯ ಸ್ವಲ್ಪ ಕೆಟ್ಟಿದೆ. ಆದ್ದರಿಂದ ಈ ಮೊದಲಿನಷ್ಟು ಎಚ್ಚರ ಅವಳಿಗಿರುವುದಿಲ್ಲ. ನೀವು ಕತ್ತಲೆಯ ಸಂದುಗಳಲ್ಲಿ ಹೊಂಚಿಕೊಂಡು, ಸಮಯನೋಡಿ ಥಕ್ಕನೆ ಅವಳ ಮೇಲೆಬಿದ್ದು ಕೊಕ್ಕಿನಿಂದ ಅಡಕತ್ತರಿಯ ಹಾಗೆ ಅವಳ ಕಂಠವನ್ನೇ ಹಿಡಿದುಬಿಟ್ಟರೆ, ಅವಳಿಂದ ಮಂತ್ರೋಚ್ಚಾರ ಮಾಡಲು ಸಾಧ್ಯವಾಗದೆ ನಿಮಗೆ ಯಾವ ಹಾನಿಯೂ ಆಗದು. ಹಾಗೆ ಅವಳನ್ನು ಎತ್ತಿಕೊಂಡು ನನ್ನ ಒಡೆಯನಾದ ಶಂಖ ಮಾಂತ್ರಿಕನ ಬೆಟ್ಟಕ್ಕೆ ಬಂದು, ಆ ಮುದುಕಿಯನ್ನು ಅವನ ಪಾದಗಳ ಮುಂದೆ ಹಾಕಿಬಿಡಿರಿ. ಆಗ ಅವಳಿಗೆ ತಕ್ಕ ಶಿಕ್ಷೆಯನ್ನೂ, ನಿಮಗೆ ತಕ್ಕ ಬಹುಮಾನವನ್ನೂ ನನ್ನ ಒಡೆಯನು ತಪ್ಪದೆ ಕೊಡುತ್ತಾನೆ."

"ನಮಗೆ ನಿನ್ನ ಯಜಮಾನನು ಹಾಗೇನೂ ದೊಡ್ಡ ಪ್ರತಿಫಲ ಕೊಡುವ ಅಗತ್ಯವೇನಿಲ್ಲ. ಇಚ್ಛಾ ಮಾತ್ರದಲ್ಲೇ ನಾವು ಸಪ್ತ ಸಮುದ್ರಗಳ ಎಲ್ಲಾ ದ್ವೀಪಗಳಿಗೂ ಹೋಗುವಂತಹ ಶಕ್ತಿ ನಮಗೆ ಕೊಟ್ಟರೆ ಸಾಕು" ಎಂದಿತು ಒಂದು ಗಂಡಭೇರುಂಡ.

"ಈ ಹುಚ್ಚು ಪಕ್ಷಿಗಳೆರಡೂ ಮಾಂತ್ರಿಕ ಶಂಖನನ್ನು ಕೇಳಿದ ವರ ಕೊಡುವ ದೇವನೆಂದು ಕೊಂಡಹಾಗಿವೆ!" ಎಂದು ಅವುಗಳ ಮಾತನ್ನು ಲಕ್ಷ್ಯಗೊಟ್ಟು ಅರ್ಥಮಾಡಿಕೊಂಡು ಚಂದ್ರವರ್ಮನು ತನ್ನೊಳಗೇ ನಗಾಡಿಕೊಂಡನು.

ಗಂಡಭೇರುಂಡ ಪಕ್ಷಿಗಳು ಹೇಳಿದುದಕ್ಕೆ ಅಗ್ನಿಪಕ್ಷಿ ಹೌದೆಂದೋ ಇಲ್ಲವೆಂದೋ ಹೇಳದೆ ತಲೆ ಮಾತ್ರ ಆಡಿಸಿ, "ನಾಳೆ ಹಗಲು ಹೊತ್ತಿನಲ್ಲಿ ನನ್ನ ನಿವಾಸಕ್ಕೆ ಒಂದುಸಾರಿ ಬರುವಿರಾ? ಸಾಧ್ಯವಾದರೆ ನನ್ನ ಯಜಮಾನನನ್ನು ನಿಮಗೆ ತೋರಿಸಿ ಪರಿಚಯ ಮಾಡಿಸುತ್ತೇನೆ" ಎಂದಿತು.

ಹಾಗೆಯೇ ಆಗಲೆಂಬಂತೆ ಗಂಡಭೇರುಂಡ ಪಕ್ಷಿಗಳು ತಲೆಯಾಡಿಸಿದುವು. ಮರು ಕ್ಷಣದಲ್ಲಿ ಅಗ್ನಿಪಕ್ಷಿ ರಿವ್ವನೆ ಆಕಾಶಕ್ಕೆ ಹಾರಿ, ಮಹಾ ವೇಗದಿಂದ ಉತ್ತರ ದಿಕ್ಕಿನ ಕಡೆಗೆ ಹೊರಟುಹೋಯಿತು. ಅಂದರೆ ಅದೇ ಉತ್ತರ ದಿಕ್ಕೆಂದು ಚಂದ್ರವರ್ಮನಿಗೆ ತಿಳಿಯಿತು.

ಗಂಡಭೇರುಂಡ ಪಕ್ಷಿಗಳು ಸ್ವಲ್ಪ ಹೊತ್ತು ಆ ಸಂಗತಿ ಈ ಸಂಗತಿ ಮಾತಾಡಿಕೊಳ್ಳುತ್ತ, ಕೊಕ್ಕುಗಳನ್ನು ನೆಲಕ್ಕೆ ಆನಿಸಿ ಉಷ್ಣಗಾಳಿಯ ಸ್ಪರ್ಶಕ್ಕೆ ನಿಶ್ಚಲವಾಗಿ ವಿಶ್ರಾಂತಿ ಅನುಭವಿಸುತ್ತ, ಹಾಗೆಯೇ ನಿದ್ದೆಗೆ ತೊಡಗಿದವು. —(ಇನ್ನೂ ಇದೆ)






# ಗೋಪಾಲನ ಶಾಪ

**ಬೇ**ತಾಳವಿಲ್ಲದ ತನ್ನ ಹೆಗಲೊಂದು ಹೆಗಲೇ? ಎಂಬ ಹಾಗೆ ಪಳಗಿ ಹೋದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹಿಂದಿರುಗಿ, ಕೊಂಬೆಯಲ್ಲಿ ನೇತಾಡುತ್ತಿರುವ ಶವವನ್ನು ಕೆಳಗಿಳಿಸಿ, ತನ್ನ ಹೆಗಲ ಮೇಲೆ ಏರಿಸಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಸೇರಿಕೊಂಡಿರುವ ಬೇತಾಳವು ಶವದ ಬಾಯಿಯ ಮೂಲಕ ಮಾತಾಡಲು ತೊಡಗಿ, "ಎಲೈ ರಾಜನೇ, ಭೀತಿಗೊಳಿಸುವ ಸ್ಥಳವಾದ ಈ ಸ್ಮಶಾನದಲ್ಲಿ ಇಂತಹ ರಾತ್ರಿಯ ಹೊತ್ತಿನಲ್ಲಿ ನೀನು ಇಷ್ಟೆಲ್ಲ ಕಷ್ಟಪಡಲಿಕ್ಕೆ ಕಾರಣ ನಿನಗೆ ಅಂಟಿಕೊಂಡ ಶಾಪವಾಗಿರಬೇಕೆಂದು ಕಾಣುತ್ತದೆ. ನೀನು ಸತ್ವಶಾಲಿಗಳಾದ ಯಾವ ಯೋಗೀಶ್ವರನಿಗೋ ಋಷಿಗೋ ಏನೋ ಬೇಡದ್ದು ಮಾಡಿ ಶಾಪ ಪಡೆದಿರಬೇಕು. ತಿಳಿತಿಳಿದೂ ಅಂತಹ ತಪ್ಪು ಮಾಡುವಂತಹ ಅಲ್ಪ ಮನುಷ್ಯನು ನೀನಲ್ಲದಿದ್ದರೂ, ಕೆಲವು ಬಾರಿ ಎಂಥವರಿಂದಲೂ ತಿಳಿಯದೆಯೇ ತಪ್ಪುಗಳಾಗಿ ಬಿಡುವುದುಂಟು. ರತ್ನಪಾಲನೆಂಬೊಬ್ಬ ದೊಡ್ಡ ವ್ಯಾಪಾರಸ್ಥನು ತನಗೆ ತಿಳಿಯದಂತೆಯೇ ಬಹು

## ಬೇತಾಳಕಥೆಗಳು?..



ಪಡೆಯುವ ಉದ್ದೇಶದಲ್ಲಿ ರತ್ನಪಾಲನು ನೈಮಿಶಾರಣ್ಯಕ್ಕೆ ಪ್ರಯಾಣ ಮಾಡಿದನು. ಅವನು ಏಳು ಕುದುರೆಗಳನ್ನು ಹೂಡಿದ ರಥದ ಮೇಲೆ ಏಳು ಹಗಲೂ ಏಳು ರಾತ್ರಿಯೂ ಪ್ರಯಾಣ ಮಾಡಿ ನೈಮಿಶಾರಣ್ಯದ ಪಕ್ಕದಲ್ಲಿದ್ದ ಮುನಿವಳ್ಳಿ ಎಂಬ ಗ್ರಾಮವನ್ನು ತಲುಪಿದನು. ಶ್ರೀಮಂತನೊಬ್ಬನು ಬಂದುದನ್ನು ನೋಡಿ ಅಲ್ಲಿಯವರಿಗೆಲ್ಲಾ ಸಂಭ್ರಮವಾಯಿತು.

ಅಲ್ಲಿಯ ವೃದ್ಧನೊಬ್ಬನು ರತ್ನಪಾಲನು ಬಂದ ಉದ್ದೇಶವನ್ನು ಕೇಳಿ ತಿಳಿದು, "ಅಪ್ಪಾ, ಭುವನೇಂದ್ರ ಮಹರ್ಷಿಗಳು ನಿನ್ನ ಕೋರಿಕೆಯನ್ನು ತಪ್ಪದೆ ನೆರವೇರಿಸುತ್ತಾರೆ. ಆದರೆ ಅವರ ಆಶ್ರಮಕ್ಕೆ ನೀನು ಒಬ್ಬನೇ ಪಾದಚಾರಿಯಾಗಿಯೇ ಹೋಗಬೇಕಾಗುತ್ತದೆ. ಅಂಥವರಿಗೇ ಅಭೀಷ್ಟ ಸಿದ್ಧಿಯಾಗುತ್ತದೆ" ಎಂದು ಹೇಳಿದನು.

ರತ್ನಪಾಲನು ಆ ವೃದ್ಧನು ಹೇಳಿದಂತೆ ಅರಣ್ಯದ ಮಧ್ಯದಲ್ಲಿರುವ ಭುವನೇಂದ್ರ ಮಹರ್ಷಿಯ ಆಶ್ರಮದ ಕಡೆಗೆ ಹೊರಟನು. ಆದರೆ ಕಾಲು ನಡಿಗೆಯಲ್ಲಿ ಹೆಚ್ಚು ದೂರ ನಡೆದು ಅಭ್ಯಾಸವಿಲ್ಲದವನಾದುದರಿಂದ ಬಹಳವಾಗಿ ಬಳಲಿದನು. ಆಶ್ರಮವು ಕಣ್ಣಿಗೆ ಬಿದ್ದ ಕೂಡಲೇ, ಮತ್ತೆ ಒಂದು ಅಡಿಯೂ ತೆಗೆದಿಡಲಾಗದೆ ನಡುಗುತ್ತಾ ಬವಳಿ ಬಂದು ಮುಗುಚಿ ಬಿದ್ದನು.

ಆ ಸಮಯದಲ್ಲಿ ಆಶ್ರಮದ ಮುಂದೆ ಕಸಪೊರಕೆಯಿಂದ ಕಸ ಬಳಿಯುತ್ತಿದ್ದ ಗೋಪಾಲನೆಂಬ ಹುಡುಗನು, ರತ್ನಪಾಲನು ಬಿದ್ದುದನ್ನು ನೋಡಿ ಓಡಿ ಬಂದನು.

ರತ್ನಪಾಲನು ಅವನನ್ನು ನೋಡಿ, "ಎಲೋ ಹುಡುಗಾ, ಕಾಲುಗಳು ತುಂಬಾ ಸೆಳೆಯುತ್ತಿವೆ. ಸ್ವಲ್ಪ ನನ್ನ ಪಾದಗಳನ್ನು ಒತ್ತಿಕೊಡುವಿಯಾ?" ಎಂದು ಕೇಳಿದನು.

ಸಾಮಾನ್ಯನೊಬ್ಬನ ಶಾಪಕ್ಕೆ ಗುರಿಯಾದ ಸಂಗತಿ ನೆನಪಿಗೆ ಬರುತ್ತದೆ. ಕೆಲವರು ನೋಟಕ್ಕೆ ಸಾಮಾನ್ಯರಂತಿದ್ದರೂ ಸತ್ವಶಾಲಿಯಾಗಿರುವುದೂ ಉಂಟು. ನೀನೂ ಹಾಗೇನಾದರೂ ಶಾಪ ಹೊಂದಿರುವಿಯೋ ಏನೋ? ಚೆನ್ನಾಗಿ ನೆನಪು ಮಾಡಿ ನೋಡಿಕೋ. ಉದಾಹರಣೆಗೆ ಆ ರತ್ನಪಾಲನ ಕಥೆಯನ್ನು ಹೇಳುತ್ತೇನೆ. ನನ್ನ ಭಾರವನ್ನು ಹೊತ್ತುಕೊಂಡು ನಡೆಯುವ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಕಥೆ ಹೇಳಲು ಪ್ರಾರಂಭಿಸಿತು:

ರತ್ನಪಾಲನೆಂಬ ವ್ಯಾಪಾರಸ್ಥನಿಗೆ ಸಕಲ ಸಂಪತ್ತು ಗಳಿದ್ದರೂ ಸಂತಾನಪ್ರಾಪ್ತಿಯಾಗಿರಲಿಲ್ಲ. ಅದಕ್ಕಾಗಿ ಏನೇನು ಮಾಡಿದರೂ ಪ್ರಯೋಜನವಾಗಲಿಲ್ಲ. ಕಡೆಗೆ ಅವನಿಗೆ ಒಂದು ಸಮಾಚಾರ ಗೊತ್ತಾಯಿತು. ನೈಮಿಶಾರಣ್ಯದೊಳಗಿರುವ ಭುವನೇಂದ್ರ ಮಹರ್ಷಿಗಳ ಹತ್ತಿರ ಸಂತಾನವನ್ನು ಬರಮಾಡುವಂತಹ ಔಷಧಿಯೊಂದಿದೆಯೆಂದು ತಿಳಿಯಿತು. ಅದನ್ನು



"ಅಗತ್ಯವಾಗಿ ಹಾಗೆಯೇ ಮಾಡುತ್ತೇನೆ. ಆದರೆ ನಾನು ಎಷ್ಟು ಹೊತ್ತು ನಿಮಗೆ ಪಾದಗಳನ್ನು ಒತ್ತುವೆನೋ ಅದಕ್ಕೆ ಎರಡು ಪಾಲಿನಷ್ಟು ಹೊತ್ತಿನವರೆಗೆ ನೀವು ನನ್ನ ಪಾದಗಳನ್ನು ಒತ್ತಬೇಕು" ಎಂದನು.

ಒಬ್ಬ ಕೆಲಸದಾಳು ತನ್ನೊಂದಿಗೆ ಹೀಗೆ ಮಾತಾಡಿದುದನ್ನು ನೋಡಿ, ರತ್ನಪಾಲನಿಗೆ ಸಹಿಸಲಾಗಲಿಲ್ಲ. ಅವನು ಕೋಪದಿಂದ, "ನಿನಗೆ ಸ್ವಲ್ಪವೂ ಚಿಕ್ಕವರು ದೊಡ್ಡವರು ಎಂಬ ತಾರತಮ್ಯವೇ ತಿಳಿಯದೇನು? ನಿನಗಿಂತ ವಯಸ್ಸಿನಲ್ಲಿ ದೊಡ್ಡವನಾದ ನನ್ನನ್ನು ನಿನ್ನ ಸೇವೆ ಮಾಡುವಂತೆ ಹೇಳುವಿಯೇನು?" ಎಂದನು.

"ನಿಮಗೆ ಒಬ್ಬ ಮಗನೇ ಇದ್ದು, ಅವನಿಗೆ ನನ್ನಷ್ಟು ವಯಸ್ಸು ಆಗಿದ್ದರೆ ನೀವು ಅವನ ಸೇವೆಗಳನ್ನು ಮಾಡುವಿರೋ ಇಲ್ಲವೋ? ಅವನ ಸೇವೆ ಮಾಡುವವರು ಅವನಿಗಿಂತ ದೊಡ್ಡವರೋ ಚಿಕ್ಕವರೋ? ನೀವೇ ಹೇಳಿ" ಎಂದನು ಗೋಪಾಲ.

ಈ ಮಾತು ಕೇಳಿ ರತ್ನಪಾಲನಿಗೆ ಇನ್ನಷ್ಟು ಹೆಚ್ಚು ಕೋಪ ಬಂದಿತು. "ನನ್ನ ಮಗನಿಗೂ ನಿನಗೂ ಎಲ್ಲಿಯ ಸಾಮ್ಯ? ಕೋಟೀಶ್ವರನ ವಾರಸುದಾರನಿಗೂ, ಕಸ ಬಳಿಯುವವನಿಗೂ ಗಂಟು ಹಾಕುವಿಯಾ?" ಎಂದನು.

ಅದನ್ನು ಕೇಳಿ ಗೋಪಾಲನು ನಗುತ್ತ, "ನಿಮಗೆ ಹಣದ ಅಹಂಕಾರ ಜಾಸ್ತಿಯಾಗಿದೆಯಪ್ಪ! ನಿಮಗೆ ಎಷ್ಟು ಹಣವಿದ್ದರೇನು? ಸಂತಾನಕ್ಕಾಗಿ ಭಿಕ್ಷುಕರ ಹಾಗೆ ಆಶ್ರಮಕ್ಕೆ ಬಂದಿದ್ದೀರಿ. ಇಲ್ಲಿಂದ ಹಿಂದಿರುಗಿದ ಮೇಲೆ ನಿಮಗೆ ಮಗನೂ ಹುಟ್ಟುತ್ತಾನನ್ನಿ. ಆ ಮಗನು ನನಗಿಂತ ಹೆಚ್ಚಿನ ಸೇವಕನೇ ಆಗಿ ಬದುಕುತ್ತಾನೆ. ಆಗ ತಿಳಿಯುತ್ತದೆ" ಎಂದು ಹೇಳಿ ಅಲ್ಲಿಂದ ಹೊರಟುಹೋದನು. ರತ್ನಪಾಲನು ಗೋಪಾಲನ ಮಾತುಗಳನ್ನು ಲಕ್ಷ್ಯಮಾಡಲಿಲ್ಲ.

ಅವನು ಮತ್ತೆ ಸ್ವಲ್ಪ ಹೊತ್ತು ಶ್ರಮ ಪರಿಹಾರ ಮಾಡಿಕೊಂಡು, ಅಲ್ಲಿಂದ ಎದ್ದು ಮುಂದೆ ಹೋಗಲಿರುವಾಗ, ಎಲ್ಲಿಂದಲೋ ಆಶ್ರಮಕ್ಕೆ ಬರುತ್ತಿದ್ದ ಭುವನೇಂದ್ರ ಮಹರ್ಷಿಯೇ ಅಲ್ಲಿಗೆ ಬಂದನು. ಮಹರ್ಷಿ ರತ್ನಪಾಲನೊಂದಿಗೆ ತಾನು ಯಾರೆಂಬುದನ್ನು ಹೇಳಿ, ಅವನು ಬಂದ ಕಾರ್ಯವನ್ನು ಕುರಿತು ತಿಳಿದುಕೊಂಡನು, "ಬಹಳ ಶ್ರಮಪಟ್ಟು ಇಲ್ಲಿಗೆ ಬಂದಿರುವಿ, ಬಾ" ಎಂದು ಭುವನೇಂದ್ರ ಮಹರ್ಷಿ ಅವನನ್ನು ಆಶ್ರಮದೊಳಗೆ ಕರೆದೊಯ್ದು ಒಳ್ಳೆಯ ರೀತಿಯಲ್ಲಿ ಅತಿಥಿ ಮರ್ಯಾದೆಗಳನ್ನು ಮಾಡಿದನು.

ರತ್ನಪಾಲನು ಮಹರ್ಷಿಯ ದಯಾಗುಣವನ್ನು ನೋಡಿ ಆಶ್ಚರ್ಯಪಡುತ್ತ, "ಸ್ವಾಮಿ, ಉತ್ತಮರಿಗೂ, ಅಧಮರಿಗೂ ಎಷ್ಟು ವ್ಯತ್ಯಾಸ! ನೀವೇನೋ ಇಷ್ಟೊಂದು ಆಪ್ಯಾಯತೆಯನ್ನು ತೋರಿಸುವಿರಿ, ನಿಮ್ಮ ಕೆಲಸದಾಳು ಗೋಪಾಲನು ತುಂಬ ತಿರಸ್ಕಾರದ ಮಾತಿನವನು. ದೊಡ್ಡವರು ಸಣ್ಣವರೆಂಬ



ಸೇವೆಯನ್ನೇ ಕೇಳಿದ್ದಾನೆ. ಆಗ ನೀನು ಅವನಿಗೆ ದೊಡ್ಡವರು ಚಿಕ್ಕವರ ಸೇವೆ ಮಾಡಬಾರದೆಂದು ಹೇಳಿರುವಿ. ಅದು ಸುಳ್ಳು ತಾನೇ ? ಚಿಕ್ಕಂದಿನಿಂದ ಇವತ್ತಿನವರೆಗೂ ನೀನು ನಿನಗಿಂತ ದೊಡ್ಡವರಿಂದಲೇ ಸೇವೆಗಳನ್ನು ಪಡೆದವನಲ್ಲವೆ ? ಅದನ್ನೇ ಅವನು ಹೇಳಿದ್ದಾನೆ. ನೀನೇನೋ ಶ್ರೀಮಂತಿಕೆಯ ಅಹಂಕಾರದಿಂದ ಅವನನ್ನು ಹೀನತ್ವಕ್ಕೆ ಇಳಿಸಿದಿ. ಅದಕ್ಕೇ ಅವನು ನಿನ್ನನ್ನು ಶಪಿಸಿದನು. ಈ ಆಶ್ರಮವಾಸಿಗಳ ಬಾಯಿಯಿಂದ ಅರ್ಥವಿಲ್ಲದ ಮಾತುಗಳು ಬಾರವು" ಎಂದನು ಭುವನೇಂದ್ರ ಮಹರ್ಷಿ.

ರತ್ನಪಾಲನು ಮಹರ್ಷಿಯನ್ನು ಏನು ಹೇಳಲಿಕ್ಕೂ ಸಾಧ್ಯವಿಲ್ಲದೆ, "ಆಗಲಿ ಸ್ವಾಮಿ. ತಪ್ಪು ನನ್ನದೇ ಎಂದು ಒಪ್ಪಿಕೊಳ್ಳುತ್ತೇನೆ. ನನಗೆ ಪಾದಚಾರಿಯಾಗಿ ನಡೆದು ಅಭ್ಯಾಸವಿರಲಿಲ್ಲ. ಬಹಳ ದಣಿದು ಹಾಗೆಲ್ಲಾ ಮಾತಾಡಿದೆನು. ಅದನ್ನು ನೀವು ಅಹಂಕಾರವೆಂದು ಭಾವಿಸಬಾರದೆಂದು ಬೇಡಿಕೊಳ್ಳುತ್ತೇನೆ. ದಯಮಾಡಿ ಗೋಪಾಲನ ಶಾಪವು ನನ್ನನ್ನು ಪೀಡಿಸದಂತೆ ಅನುಗ್ರಹ ತೋರಿಸಬೇಕು" ಎಂದು ಬೇಡಿಕೊಂಡನು.

"ನೀನು ನಿಜಕ್ಕೂ ಒಳ್ಳೆಯವನೇ. ನಿನ್ನ ಒಳ್ಳೆಯತನವೇ ನಿನ್ನನ್ನು ರಕ್ಷಿಸುತ್ತದೆ. ಒಳ್ಳೆಯವರಿಗೆ ಯಾವ ಶಾಪಗಳೂ ತಟ್ಟವು" ಎಂದು ಭುವನೇಂದ್ರ ಮಹರ್ಷಿ ಒಂದು ಔಷಧವನ್ನು ರತ್ನಪಾಲನಿಗೆ ಕೊಟ್ಟು, "ಇದನ್ನು ನಿನ್ನ ಹೆಂಡತಿಗೆ ಕೊಡು. ಇದರ ಮಹಿಮೆಯಿಂದ ನಿನ್ನ ಹೆಂಡತಿ ಗರ್ಭಿಣಿಯಾಗುತ್ತಾಳೆ. ನವಮಾಸಗಳು ತುಂಬಿದ ಮೇಲೆ ಮಗನನ್ನು ಪ್ರಸವಿಸುತ್ತಾಳೆ. ಅದೇ ಸಮಯದಲ್ಲಿ ನಿನ್ನ ಮನೆಯ ದಾಸಿಗೆ ಕೂಡಾ ಒಬ್ಬ ಮಗನು ಹುಟ್ಟುತ್ತಾನೆ. ಹುಟ್ಟಿದ ಕೂಡಲೇ ನಿನ್ನ ಮಗು ದಾಸಿಯ ಬಳಿಗೂ, ದಾಸಿಯ ಮಗು ನಿನ್ನ ಹೆಂಡತಿಯ ಬಳಿಗೂ ಸೇರುತ್ತದೆ. ಆಮೇಲೆ

ತಾರತಮ್ಯ ತಿಳಿಯದವನು" ಎಂದು ಅವನಿಗೂ ತನಗೂ ನಡೆದ ಸಂಭಾಷಣೆಗಳನ್ನು ಹೇಳಿದನು.

ಅದನ್ನು ಕೇಳಿ ಮಹರ್ಷಿ ಆಶ್ಚರ್ಯಪಡುತ್ತ, "ನಾನು ಕೊಡುವ ಔಷಧಿಯಿಂದ ನಿನಗೆ ಸಂತಾನ ಪ್ರಾಪ್ತಿಯಾಗುತ್ತದೆ. ಆದರೆ ಗೋಪಾಲನ ಮಾತುಗಳು ಶಾಪವಾಗಿ ನಿನ್ನನ್ನು ಪೀಡಿಸುವುದಂತೂ ತಪ್ಪದು" ಎಂದನು.

ಆ ಮಾತು ಕೇಳಿ ರತ್ನಪಾಲನು ಕಳವಳಪಡುತ್ತ, "ಗೋಪಾಲನ ಪ್ರವರ್ತನೆ ಬಹಳ ಅನಾಗರಿಕವಾಗಿರುವಂತಹುದು. ಅವನ ಮಾತುಗಳು ನನಗೆ ಶಾಪವಾಗುವುದು ಅನ್ಯಾಯವಲ್ಲವೇ ಸ್ವಾಮಿ ? ಅದಕ್ಕೆ ನೀವೇ ಏನಾದರೂ ಪರಿಹಾರ ತೋರಿಸಬೇಕು" ಎಂದು ಕೇಳಿಕೊಂಡನು.

"ಗೋಪಾಲನು ಹೇಳಿದ ಮಾತಿನಲ್ಲಿ ಸತ್ಯವಿದೆಯೇ ಹೊರತು ಅನಾಗರಿಕತೆ ಯಾವುದೂ ಇಲ್ಲ. ಅವನು ನಿನಗೆ ಸೇವೆ ಮಾಡುವುದಕ್ಕೆ ಪ್ರತಿಫಲವಾಗಿ ಅಂತಹ



ಆ ದಾಸಿ ನಿನ್ನ ಕಣ್ಣಿಗೆ ಕಾಣಿಸಲಾರಳು. ಎಂದೋ ಒಂದು ದಿನ ಗೋಪಾಲನು ನಿನ್ನ ಊರಿಗೆ ಬರುತ್ತಾನೆ. ಅವನನ್ನು ತೃಪ್ತಿಪಡಿಸಿ ನಿನ್ನ ಮಗನ ರಹಸ್ಯವನ್ನು ತಿಳಿದುಕೊಳ್ಳುವಿ. ಇದಕ್ಕಿಂತ ಹೆಚ್ಚಿಗೆ ನಾನೇನೂ ಹೇಳಲಾರೆ. ಇನ್ನು ಹೋಗು" ಎಂದನು.

ರತ್ನಪಾಲನು ಔಷಧಿ ತೆಗೆದುಕೊಂಡು ತನ್ನ ಊರಿಗೆ ಹಿಂದಿರುಗಿದನು. ಆಮೇಲೆ ಕ್ರಮಕ್ರಮವಾಗಿ ಎಲ್ಲವೂ ಭುವನೇಂದ್ರ ಮಹರ್ಷಿ ಹೇಳಿದ ಹಾಗೆಯೇ ನಡೆಯಿತು. ರತ್ನಪಾಲನು ತೀರಾ ಹತಾಶನಾದನು. ಹೆಂಡತಿ ತನ್ನದಲ್ಲದ ಮಗುವನ್ನು ಮುದ್ದಿಸಿ ಕೊಂಡಾಡುವಳೆಂಬ ಭಯದಿಂದ ಅವಳಿಗೆ ನಡೆದ ಸಂಗತಿಯನ್ನು ರಹಸ್ಯವಾಗಿ ಹೇಳಿ, "ನಿಜವಾದ ನಮ್ಮ ಮಗನು ಇನ್ನು ಕೆಲವು ವರ್ಷಗಳ ಮೇಲೆ ನಮ್ಮ ಬಳಿಗೆ ಬರುತ್ತಾನೆ. ನೀನು ಈ ಮಗುವಿನ ಮೇಲೆ ಮಮತೆ ಮಾಡಿಕೊಂಡಿದ್ದರೆ ಆಮೇಲೆ ದಾಸಿಯ ಕೈಗೆ ಇವನನ್ನು ಕೊಡಲು ಕಷ್ಟವಾಗಬಹುದು. ಹೀಗೆಲ್ಲಾ ಆದುದು ನಮ್ಮ ದುರದೃಷ್ಟ. ನಡೆದುದನ್ನು ಯಾರಿಗೂ ಹೇಳದೆ ರಹಸ್ಯವಾಗಿಯೇ ಇಟ್ಟುಕೊಳ್ಳೋಣ" ಎಂದನು.

ಗಂಡನು ಹೇಳಿದುದನ್ನು ಕೇಳಿ ರತ್ನಪಾಲನ ಹೆಂಡತಿ ಬಹಳವಾಗಿ ರೋದಿಸಿದಳು. ಆಮೇಲೆ ಮಗುವನ್ನು ದಾಸಿಯರ ವಶಕ್ಕೇ ಕೊಟ್ಟುಬಿಟ್ಟಳು, ಅವನು ಸೇವಕರೊಳಗೆ ಒಬ್ಬನಾಗಿ ಬೆಳೆಯುತ್ತ ದೊಡ್ಡವನಾಗಿ ಎಲ್ಲರಿಗೂ ಚಾಕರಿ ಮಾಡಿ ಕೊಂಡಿದ್ದನು. ಚಾಕರಿತನ ಅವನಿಗೆ ಮೈಯುಂಡು ಹೋಯಿತು.

ರತ್ನಪಾಲನ ಕೆಲಮಂದಿ ಮಿತ್ರರು ಇದನ್ನು ನೋಡಿ ಕಾರಣ ಕೇಳಿದರು. ಅದಕ್ಕೆ ಅವನು, "ಬಹಳ ಕಾಲ ಮಕ್ಕಳಿಲ್ಲದೆ ಹುಟ್ಟಿದ ಮಗ. ಮಮತೆ ಇಟ್ಟುಕೊಳ್ಳದೆ ಬೆಳೆಸಬೇಕೆಂದು ಭುವನೇಂದ್ರ ಮಹರ್ಷಿಯ ಆಜ್ಞೆ" ಎಂದನು. ಹೀಗೆ ಹತ್ತು ವರ್ಷಗಳು ಕಳೆದುವು. ಒಂದು ದಿನ ಗೋಪಾಲಸ್ವಾಮಿ ಎಂಬ ದೊಡ್ಡ ಯೋಗಿ ಆ ಊರಿಗೆ ಬಂದಿರುವ ಸುದ್ದಿ ರತ್ನಪಾಲನಿಗೆ ತಿಳಿಯಿತು. ಕೂಡಲೆ ರತ್ನಪಾಲನು ಅವನ ಬಳಿಗೆ ಹೋದನು.

ಆ ಸಮಯದಲ್ಲಿ ಗೋಪಾಲಯೋಗಿ ಯಾವಳೋ ಒಬ್ಬಳೊಂದಿಗೆ, "ನೀನು ತಾಯಿ ಮಗುವನ್ನು ಬೇರೆ ಮಾಡಿದವಳು. ನಿನ್ನ ಕಷ್ಟಗಳಿಗೆಲ್ಲಾ ಇದೇ ಕಾರಣ. ಮತ್ತೆ ಆ ತಾಯಿ ಮಗಂದಿರನ್ನು ಒಂದುಗೂಡಿಸು. ನಿನ್ನ ಕಷ್ಟಗಳು ಪರಿಹಾರವಾಗುತ್ತವೆ" ಎಂದು ಹೇಳುವುದು ಕೇಳಿಸಿತು.

ರತ್ನಪಾಲನು ಕೋಪದಿಂದ ಗೋಪಾಲಯೋಗಿಯ ಮುಂದೆ ಹೋಗಿ, "ಓಯ್ ಸ್ವಾಮಿ, ನೀವು ಭುವನೇಂದ್ರ ಮಹರ್ಷಿಗಳ ಆಶ್ರಮದಲ್ಲಿ ಆಳಾಗಿದ್ದ ಗೋಪಾಲ ತಾನೆ ?" ಎಂದು ಕೇಳಿದನು.

"ಹೌದು" ಎಂದನು ಗೋಪಾಲಯೋಗಿ.

ಆಗ ರತ್ನಪಾಲನು ಅಲ್ಲಿ ಸೇರಿದವರ ಮುಂದೆ ತನ್ನ ಕಥೆಯನ್ನೆಲ್ಲಾ ಹೇಳಿ, "ಹೀಗೆ ಸ್ವಲ್ಪ ಮಾತ್ರ ಕಾರಣಕ್ಕೆ ಶಾಪಕೊಟ್ಟು ತಾಯಿಯನ್ನೂ ಮಗನನ್ನೂ ಬೇರ್ಪಡಿಸಿದ ನೀವು ಎಂತಹ ಕಷ್ಟಗಳಿಗೆ ಸಿಕ್ಕಿದಿರೆಂದು ಹೇಳುವಿರಾ ?" ಎಂದನು.

ಗೋಪಾಲಯೋಗಿ ಸಣ್ಣಗೆ ನಕ್ಕು, "ನಾನು ಯಾರನ್ನೂ ಬೇರೆಪಡಿಸಲೇ ಇಲ್ಲ. ಇಷ್ಟು ಕಾಲದ ವರೆಗೆ ನಿಮ್ಮ ಮನೆಯಲ್ಲಿ ಬೆಳೆಯುತ್ತಿರುವವನು ನಿಮ್ಮ ಸ್ವಂತ ಮಗನೇ" ಎಂದನು.

ರತ್ನಪಾಲನು ಅತ್ಯಂತ ಸಂತೋಷದಿಂದ ಗೋಪಾಲಯೋಗಿಯ ಪಾದಗಳಿಗೆ ಸಾಷ್ಟಾಂಗ ನಮಸ್ಕಾರಮಾಡಿ, ಬೇಗಬೇಗನೆ ಮನೆಗೆ ಹೋದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ರತ್ನಪಾಲನ ಮಗುವಲ್ಲದವನನ್ನು ಅವನ ಮಗನೇ ಎಂದು ಗೋಪಾಲಯೋಗಿ ಏಕೆ ಸುಳ್ಳು ಹೇಳಿದನು ? ತಾನು ದುಡುಕುತನದಿಂದ ಶಾಪ ಕೊಟ್ಟೆನೆಂದು ಅವನಿಗೆ ಪಶ್ಚಾತ್ತಾಪವಾಗಿತ್ತೇನು ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಒಡೆದು ಹೋಗುತ್ತದೆ" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಭುವನೇಂದ್ರ ಮಹರ್ಷಿಯಂತಹ ಮಹಾತ್ಮನ ಸಂಪರ್ಕದಲ್ಲಿರುವ ಗೋಪಾಲನು ಸುಳ್ಳು ಹೇಳುವನೆಂಬುದು ಸರಿಯಲ್ಲ. ರತ್ನಪಾಲನ ವಿಚಿತ್ರ ಅನುಭವಗಳಿಗೆ ಅವನ ಕಲ್ಮಷಾತ್ಮವೇ ಕಾರಣವಾಗಿದೆ. ಅವನು ಮಹರ್ಷಿಯ ಎಚ್ಚರಿಕೆಯ ಗೂಢಾರ್ಥವನ್ನು ತಿಳಿಯಲಿಲ್ಲ. ಅದಕ್ಕೆ ಅವನ ಅಹಂಕಾರವು ಅಡ್ಡ ನಿಂತಿತ್ತು. ಒಳ್ಳೆಯವರನ್ನು ಯಾವ ಶಾಪಗಳೂ ಬಾಧಿಸಲಾರವೆಂದು ಮಹರ್ಷಿ ಅವನಿಗೆ ಹೇಳಿದ್ದಾನೆ. ಆದರೂ ರತ್ನಪಾಲನು ಮಗುಗಳ ಬದಲಾವಣೆ ನಡೆಯಿತೆಂಬ ಭ್ರಮೆಯಲ್ಲಿ ತನ್ನ ಮಗನನ್ನು ದಾಸಿಯರ ವಶಕ್ಕೆ ಒಪ್ಪಿಸಿಬಿಟ್ಟನು. ಇದು ಅವನಲ್ಲಿರುವ ಕೆಟ್ಟತನದ ನಿದರ್ಶನ. ದಾಸಿಯೊಬ್ಬಳು ಕಾಣದೆ ಹೋದುದೂ, ಗೋಪಾಲಯೋಗಿ ಒಬ್ಬಳ ಹತ್ತಿರ ತಾಯಿ ಮಗುವನ್ನು ಬೇರೆ ಮಾಡಿದುದೇ ಕಾರಣವೆಂದು ಕೋಪಿಸಿದುದೂ ಕಾಕತಾಳೀಯವಾಗಿ ನಡೆದಿವೆ. ಹುಟ್ಟಿದಂದಿನಿಂದಲೂ ರತ್ನಪಾಲನ ಮನೆಯಲ್ಲೇ ಬೆಳೆದ ಮಗು ಭುವನೇಂದ್ರ ಮಹರ್ಷಿ ಕೊಟ್ಟ ಔಷಧಿಯ ಮಹಿಮೆಯಿಂದಲೇ ಹುಟ್ಟಿದವನೆನ್ನಲು ಸಂದೇಹವಿಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವಸಮೇತ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡಿತು.





# ಬಡ್ಡಿ ಸಮೇತ

ಒಂದು ಊರಲ್ಲಿ ಒಬ್ಬ ಬಡ ಬೇಸಾಯಗಾರನಿದ್ದನು. ಅವನ ಬೆಳೆಗಳೆಲ್ಲ ಕೆಟ್ಟುಹೋದುವು, ಸಾಲಮಾಡಿದನು. ಮತ್ತೆ ಅಲ್ಪ ಸ್ವಲ್ಪ ಬಂದ ಬೆಳೆಯ ಫಲವನ್ನು ಬಡ್ಡಿಯ ಲೆಕ್ಕದಲ್ಲಿ ಧನಿಕನಿಗೆ ಕೊಟ್ಟನು. ಹೀಗೆ ರೈತನಿಗೆ ಬಡತನವೇ ಆಯಿತು.

ಆ ಸಮಯದಲ್ಲಿ ಅವನು ಸಾಲಕೊಡುವ ಧನಿಕನ ಬಳಿಗೆ ಹೋಗಿ, "ನೋಡಯ್ಯ, ಇನ್ನು ನನ್ನಿಂದ ನಿಮಗೆ ಒಂದು ಚಿಕ್ಕಾಸೂ ಬಾರದು. ನನ್ನ ಹತ್ತಿರ ಇದ್ದುದೆಲ್ಲಾ ತೀರಿಹೋಯಿತು. ನೀವು ಬಹಳ ಹಣ ಸಂಪಾದಿಸಿದ್ದೀರಿ. ಆ ಉಪಾಯ ನನಗೂ ಹೇಳುವಿರಾ ? " ಎಂದನು.

"ಅಷ್ಟೂ ತಿಳಿಯದ ಹುಚ್ಚನೇ ನೀನು ? ಹಣ ಕೊಡುವವನು ಆ ರಾಮನೇ. ಅವನನ್ನೇ ಕೇಳು, ಹೋಗು " ಎಂದನು ಧನಿಕ.

"ಯಾವ ರಾಮ ? " ಎಂದು ರೈತನು ಕೇಳಲು "ಅಯೋಧ್ಯೆಯ ರಾಮನೇ " ಎಂದನು ಧನಿಕ.

ಬಡರೈತನು ರಾಮನನ್ನು ಕೇಳಿ ಹಣ ಪಡೆಯಬೇಕೆಂದು ಪ್ರಯಾಣ ಮಾಡಿದನು. ಅವನ ಹೆಂಡತಿ ಅವನಿಗೆ ಮೂರು ರೊಟ್ಟಿಗಳನ್ನು ಕಟ್ಟಿಕೊಟ್ಟಳು.

ಸ್ವಲ್ಪದೂರ ಹೋದಾಗ ರೈತನಿಗೆ ಒಬ್ಬ ಬ್ರಾಹ್ಮಣನು ಇದಿರಾದನು. ರೈತನು ತನ್ನ ಬುತ್ತಿಯಿಂದ ಒಂದು ರೊಟ್ಟಿಯನ್ನು ಆ ಬ್ರಾಹ್ಮಣನ ಕೈಗೆ ಕೊಟ್ಟು, "ಸ್ವಾಮಿ. ನಾನು ರಾಮನನ್ನು ನೋಡಲು ಹೋಗುತ್ತೇನೆ. ತಮಗೆ ದಾರಿ ಗೊತ್ತಿದ್ದರೆ ಹೇಳುವಿರಾ ? " ಎಂದು ಕೇಳಿದನು.

ಬ್ರಾಹ್ಮಣನು ರೊಟ್ಟಿ ತೆಗೆದುಕೊಂಡು ಆಕಾಶವನ್ನು ನೋಡಿ ಕಣ್ಣುಮುಚ್ಚಿ ಏನೂ ಹೇಳದೆ ತನ್ನ ಪಾಡಿಗೆ ಹೋಗಿಬಿಟ್ಟನು.

ರೈತನು ಮತ್ತಿಷ್ಟು ಮುಂದೆ ಹೋದಾಗ ಒಬ್ಬ ಯೋಗಿ ಇದಿರಾದನು. ರೈತನು ಯೋಗಿಗೆ ನಮಸ್ಕಾರಮಾಡಿ, ಬುತ್ತಿಯೊಳಗಿಂದ ಇನ್ನೊಂದು ರೊಟ್ಟಿಯನ್ನು ತೆಗೆದು ಯೋಗಿಗೆ ಕೊಟ್ಟು "ಸ್ವಾಮಿ, ರಾಮನ ಬಳಿಗೆ ಹೋಗಬೇಕಾಗಿದೆ. ದಾರಿ ಹೇಗೋ " ಎಂದು ಕೇಳಿದನು.

ಯೋಗಿ ಮೌನವಾಗಿ ಅವನನ್ನು ನೋಡಿ, ತನ್ನ ಪಾಡಿಗೆ ಹೊರಟುಹೋದನು.

ಇನ್ನಿಷ್ಟು ಮುಂದೆ ಹೋದಾಗ ಒಬ್ಬ ಬಡ ಸೊರಕಲು ಮನುಷ್ಯನು ಕಂಡುಬಂದನು. ಅವನು

ಅನೇಕ ದಿನಗಳಿಂದ ಉಪವಾಸವಿದ್ದಂತೆ ಹೊಟ್ಟೆ ಬೆನ್ನಿಗೆ ಅಂಟಿದ್ದಿತು. ರೈತನು ಅವನನ್ನು ನೋಡಿ ಕನಿಕರಪಟ್ಟು, ಅವನ ಪಕ್ಕದಲ್ಲಿ ಕುಳಿತು, ತನ್ನೊಂದಿಗಿದ್ದ ಮೂರನೇ ರೊಟ್ಟಿಯನ್ನು ಅವನಿಗೆ ಕೊಟ್ಟು ತಿನ್ನಲು ಹೇಳಿದನು.

ಹಸಿದವನು ಅದನ್ನು ತಿಂದು, "ಎಲ್ಲಿಗೆ ಹೋಗುವಿಯಪ್ಪಾ ?" ಎಂದು ಕೇಳಿದನು.

"ಹಣ ಕೇಳಲು ಅಯೋಧ್ಯೆಯ ರಾಮನನ್ನು ನೋಡಲು ಹೋಗುತ್ತೇನೆ. ಯಾರೂ ದಾರಿ ತೋರಿಸುವವರಿಲ್ಲ. ಗೊತ್ತಿದ್ದರೆ ಹೇಳುವಿಯಾ ?" ಎಂದು ಕೇಳಿದನು ರೈತ.

ಸೊರಕಲನು ನಕ್ಕು "ನಾನೇ ಅಯೋಧ್ಯೆಯ ರಾಮ. ನೀನು ಇನ್ನು ಎಲ್ಲಿಗೂ ಹೋಗಬೇಕಾಗಿಲ್ಲ. ಇಕೋ, ಈ ಶಂಖ ತೆಗೆದುಕೋ. ನಿನಗೆ ಬೇಕಾದುದನ್ನು ನೆನೆದು ಈ ಶಂಖವನ್ನು ಊದು. ಸಿಗುತ್ತದೆ" ಎಂದು ಶಂಖವನ್ನು ಕೊಟ್ಟು, ಅದನ್ನು ಊದುವ ಕ್ರಮವನ್ನೂ ಕಲಿಸಿದನು. ಸಂತೋಷದಿಂದ ಮನೆಗೆ ಹಿಂದಿರುಗಿದನು ರೈತ. ಈಗ ಅವನಿಗೆ ಯ ವ ಕೊರತೆಯೂ ಇಲ್ಲ. ಏನು ಬೇಕಾದರೂ ಶಂಖವನ್ನು ಊದಿದ ಕೂಡಲೇ ಸಿಕ್ಕಿಬಿಡುತ್ತಿತ್ತು.

ಅವನ ಪರಿಸ್ಥಿತಿ ಚೆನ್ನಾದುದನ್ನು ನೋಡಿ ಬಡ್ಡೀ ಲೇವಾದೇವಿಯ ಧನಿಕನು ಒಂದುದಿನ ರೈತನ ಬಳಿಗೆ ಬಂದು ನಡೆದ ಸಂಗತಿಯನ್ನೆಲ್ಲಾ ತಿಳಿದುಕೊಂಡನು. ಆಮೇಲೆ ಅವನು ರೈತನ ಶಂಖವನ್ನು ಅಪಹರಿಸಿ ತನ್ನ ಮನೆಗೆ ತೆಗೆದುಕೊಂಡು ಹೋದನು. ಆದರೆ ಅದನ್ನು ಊದುವ ಕ್ರಮವು ಅವನಿಗೆ ತಿಳಿಯದು.

ಆದುದರಿಂದ ಧನಿಕನು ರೈತನ ಬಳಿಗೆ ಬಂದು, "ನೋಡಪ್ಪ, ನಿನ್ನ ಶಂಖ ನನ್ನ ಹತ್ತಿರ ಬಂದಿದೆ. ಒಂದು ಷರತ್ತಿನ ಮೇಲೆ ಅದನ್ನು ನಿನಗೆ ಕೊಡುತ್ತೇನೆ. ಆ ಶಂಖದಿಂದ ನಿನಗೆ ಏನೇನು ಸಿಗುವುದೋ ಅದರ ಎರಡು ಪಾಲು ನನಗೆ ಸಿಗಬೇಕು. ಹಾಗೆ ನೀನು ಮಾಡದಿದ್ದರೆ ನಿನ್ನ ಹಳೇ ಸಾಲದ ಲೆಕ್ಕದಲ್ಲಿ ಅದನ್ನು ನಾನೇ ಇಟ್ಟುಕೊಳ್ಳುತ್ತೇನೆ" ಎಂದನು.

ಉಪಾಯವಿಲ್ಲದೆ ರೈತನು ಅದಕ್ಕೆ ಒಪ್ಪಿದನು. ಧನಿಕನು ಶಂಖವನ್ನು ಹಿಂದಿರುಗಿ ತಂದುಕೊಟ್ಟನು. ಅಂದಿನಿಂದ ಶಂಖವು ರೈತನಿಗೆ ಏನು ಕೊಟ್ಟರೂ ಅದರ ಇಮ್ಮಡಿ ಧನಿಕನಿಗೂ ಸಿಗುತ್ತಿತ್ತು.

ಒಂದು ದಿನ ರೈತನಿಗೆ ದೊಡ್ಡದೊಂದು ಆಲೋಚನೆ ಬಂತು. ಅವನು ಮನಸ್ಸಿನಲ್ಲಿ "ನನ್ನದೊಂದು ಕಣ್ಣು ಹೋಗಲಿ !" ಎಂದುಕೊಂಡನು. ರೈತನ ಒಂದು ಕಣ್ಣು ಹೋಯಿತು. ಅಲ್ಲಿ ಧನಿಕನಿಗೆ ಎರಡು ಕಣ್ಣುಗಳೂ ಹೋದುವು. ರೈತನಿಗೆ ಅದೊಂದು ತೃಪ್ತಿ.





# ನಿಧಿಗಳ ಗುಟ್ಟು

ಕೋಸಲ ದೇಶದ ರಾಜನಾದ ಸೂರ್ಯಸೇನನಿಗೆ ಎಪ್ಪತ್ತು ವರ್ಷ ವಯಸ್ಸಾಯಿತು. ಸಹಜವಾಗಿ ಬರುವ ವೃದ್ಧಾಪ್ಯದ ಅಶಕ್ತತೆಗಳೊಂದಿಗೆ ಅನಾರೋಗ್ಯವೂ ಸೇರಿಕೊಂಡಿತು. ಈ ಕಾರಣಗಳಿಂದ ರಾಜಕಾರ್ಯಗಳಲ್ಲಿ ಮೊದಲಿನ ಹಾಗೆ ಶ್ರದ್ಧೆ ತೋರಿಸಲು ಅವನಿಗಾಗದೆ ಹೋಯಿತು. ಆದುದರಿಂದ ದೇಶದ ಪರಿಸ್ಥಿತಿಯಲ್ಲಿ ಹೆಚ್ಚು ಕಡಿಮೆಯಾಗತೊಡಗಿತು.

ಪ್ರಜೆಗಳಲ್ಲಿ ಹುದುಗಿದ ಕೆಟ್ಟ ಗುಣಶಕ್ತಿಗಳು ಅಲ್ಲಲ್ಲಿ ತಲೆಯೆತ್ತ ತೊಡಗಿದುವು. ದೇಶದಲ್ಲಿ ಅಲ್ಲಲ್ಲಿ ಅರಾಜಕತೆ ಕಾಣತೊಡಗಿತು. ಕಳ್ಳತನಗಳೂ, ದಾರಿ ಬಡಕತನಗಳೂ ನಡೆಯ ತೊಡಗಿದುವು. ಕೋಸಲ ದೇಶವನ್ನು ತನ್ನ ದೇಶದೊಂದಿಗೆ ಸೇರಿಸಿಬಿಡಬೇಕೆಂದು ಹೊಂಚಿಕೊಂಡಿರುವ ವಿದೇಹರಾಜನಿಗೆ ಇದೆಲ್ಲಾ ಒಳ್ಳೆಯ ಅವಕಾಶಗಳಾಗಿ ತೋರಿದುವು. ಅಂತಲೇ ಅವನು ಒಳಗಿಂದೊಳಗೇ ಯುದ್ಧದ ಪ್ರಯತ್ನಗಳನ್ನು ಮಾಡಲು ತೊಡಗಿದನು.

ಇಂತಹ ಸಮಯದಲ್ಲಿ ದೂರದ ದೇಶದಲ್ಲಿದ್ದು ವಿದ್ಯಾಭ್ಯಾಸಗಳನ್ನು ಮುಗಿಸಿ ಸೂರ್ಯಸೇನನ ಮಗ ಚತುರಸೇನನು ಸ್ವದೇಶಕ್ಕೆ ಬಂದನು. ಪ್ರೌಢನಾಗಿ ಪ್ರತಾಪಶಾಲಿಯಾಗಿ ಬಂದ ಯುವರಾಜನನ್ನು ನೋಡಿ ಎಲ್ಲರಿಗೂ ಸಂತೋಷವಾಯಿತು. ಮಂತ್ರಿ ರಾಜನ ಬಳಿಗೆ ಹೋಗಿ, ಇನ್ನು ತಡ ಮಾಡದೆ ಯುವರಾಜನಿಗೆ ಪಟ್ಟಾಭಿಷೇಕ ಮಾಡಿ, ಪರಿಪಾಲನೆಯ ಭಾರವನ್ನು ಪ್ರಾಯ ಸಮರ್ಥನಾದ ಮಗನಿಗೆ ವಹಿಸಿಕೊಡುವುದು ಒಳ್ಳೆಯದೆಂದು ಸಲಹೆ ಮಾಡಿದನು.

ಸೂರ್ಯಸೇನನಿಗೆ ಈ ಸಲಹೆ ಹಿಡಿಸಲಿಲ್ಲ. ನಿಶ್ಚಿಂತನಾಗಿ ದೂರ ದೇಶದಲ್ಲಿದ್ದು ಯಾವುದೊಂದು ಅನುಭವವೂ ಇಲ್ಲದ ಕುಮಾರನಿಗೆ ಒಮ್ಮೆಗೇ ರಾಜ್ಯವನ್ನು ಒಪ್ಪಿಸಿಬಿಟ್ಟರೆ ಗಂಡಾಂತರಕ್ಕೆ ಕಾರಣವಾದೀತೆಂದು ಅವನು ಅಭಿಪ್ರಾಯಪಟ್ಟನು. ಪಟ್ಟಾಭಿಷೇಕಕ್ಕೆ ಮೊದಲು ಮಗನಿಗೆ ಇರುವ ವಿವೇಕವೂ ಲೋಕಜ್ಞಾನವೂ ಎಷ್ಟರ ಮಟ್ಟಿಗಿದೆ ಎಂಬುದನ್ನು ಖಚಿತಪಡಿಸಿಕೊಂಡು, ಆಮೇಲೆ ಪಟ್ಟಾಭಿಷೇಕ ನಡೆಸಬೇಕೆಂದು ಅಭಿಪ್ರಾಯಪಟ್ಟನು.

ಅದರಂತೆ ಸೂರ್ಯಸೇನನು ಮಗನನ್ನು ತನ್ನ ಬಳಿಗೆ ಕರೆಯಿಸಿ, ದೇಶದ ಪರಿಸ್ಥಿತಿಯನ್ನೆಲ್ಲ ಅವ

ಸಾಂಬ



ನೊಂದಿಗೆ ಹೇಳಿ, "ಈ ಸಂದರ್ಭದಲ್ಲಿ ಏನು ಮಾಡಿದರೆ ಚೆನ್ನಾಗಿರುತ್ತದೆ ?" ಎಂದು ಕೇಳಿದನು.

ಚತುರಸೇನನು ಸ್ವಲ್ಪ ಹೊತ್ತು ಆಲೋಚನೆ ಮಾಡಿ, "ಮೊದಲು ಕೋಟೆಯ ಗೋಡೆಗಳನ್ನು ಬಲಪಡಿಸಬೇಕು. ಶತ್ರುದಾಳಿಯನ್ನು ಯಾವ ಭಾಗವು ತಾಳಲಾಗದಂತೆ ಶಿಥಿಲವಾಗಿದೆಯೋ ಅದನ್ನೆಲ್ಲ ಗಟ್ಟಿಪಡಿಸಿಡಬೇಕು. ಅದರೊಂದಿಗೆ ನಮ್ಮ ಸೈನಿಕರನ್ನೂ ಆಯುಧಗಳೊಂದಿಗೆ ಸಿದ್ಧರಾಗಿರುವಂತೆಯೂ ಮಾಡಬೇಕು. ಇವೆರಡು ಮೊದಲು ಮಾಡಬೇಕಾದ ಕಾರ್ಯಗಳು" ಎಂದನು.

"ಅದು ಸರಿಯಪ್ಪ. ಆದರೆ ನಮ್ಮ ದೇಶದೊಳಗೇ ಇದ್ದುಕೊಂಡು ಕೊಳ್ಳೆ, ಕಳವು ಮುಂತಾದ ಅರಾಜಕತೆಗಳನ್ನು ಸೃಷ್ಟಿಸುವವರ ವಿಷಯ ಯೋಚಿಸಿದಿಯಾ ? ಹೊರಗಿನಿಂದ ಬರುವ ಶತ್ರುಗಳಿಗಿಂತಲೂ ಒಳಗಿನ ಶತ್ರುಗಳು ಹೆಚ್ಚಿಗೆ ಅಪಾಯ ತರುವವರಲ್ಲವೆ ?" ಎಂದನು ಸೂರ್ಯಸೇನ.

ಅದನ್ನು ಕೇಳಿ ಚತುರಸೇನನು, "ಅಪ್ಪಾ, ದೇಶದಲ್ಲಿ ನಡೆಯುವ ಕಳ್ಳತನ, ಕೊಳ್ಳೆ, ಸುಲಿಗೆಗಳೆಲ್ಲ ತಾತ್ಕಾಲಿಕವಾಗಿ ಪ್ರಜೆಗಳನ್ನು ಸಂಕಟಪಡಿಸುವ ಸಂಗತಿಗಳು. ಆದರೆ ಅವರು ಕಳ್ಳತನ ಮಾಡಿದ ಸೊತ್ತುಗಳು ನಮ್ಮ ದೇಶವನ್ನು ದಾಟಿ ಹೋಗುವುದಿಲ್ಲ. ನಾವು ಆ ದುಷ್ಟರನ್ನು ಹಿಡಿದುಕೊಂಡಾಗ ಅವರ ಆಸ್ತಿಪಾಸ್ತಿಗಳನ್ನೆಲ್ಲಾ ಸ್ವಾಧೀನಪಡಿಸಿಕೊಂಡು ನಷ್ಟಪಟ್ಟವರಿಗೆ ಧನ ಸಹಾಯ ಮಾಡಲು ಸಾಧ್ಯವಿದೆ. ಆದುದರಿಂದ ಅದನ್ನು ಆಮೇಲಿನ ಕಾರ್ಯವಾಗಿ ಮಾಡಬಹುದು" ಎಂದನು.

"ಅಂದರೆ ನಿನ್ನ ದೃಷ್ಟಿಯಲ್ಲಿ ಹೊರಗಿನಿಂದ ಬರುವ ಶತ್ರುರಾಜನಿಂದಲೇ ಹೆಚ್ಚಿನ ಅಪಾಯವೆನ್ನುವಿ ಎಂದಾಯಿತು. ನಿಜತಾನೇ ?" ಎಂದು ಸೂರ್ಯಸೇನನು ಕೇಳಿದನು.

"ನನ್ನ ಅಭಿಪ್ರಾಯ ಹಾಗೆಯೇ ಅಪ್ಪಾ. ನಾವು ತಕ್ಕ ರಕ್ಷಣೆಯ ಏರ್ಪಾಡು ಮಾಡಬೇಕಾದುದು ತತ್‌ಕ್ಷಣ ಕರ್ತವ್ಯ. ಗೂಢಚಾರರು ತಂದ ವಾರ್ತೆಗಳಿಂದ ಹೊರಗಿನ ಅಪಾಯ ಗೊತ್ತಾಗಿದೆಯಷ್ಟೆ ? ಯುದ್ಧದಲ್ಲಿ ನಾವು ವಿದೇಹರಾಜನಿಂದ ಸೋತು ಗೀತು ಹೋದರೆ, ಅವನ ಸೈನಿಕರು ನಮ್ಮ ಪ್ರಜೆಗಳ ಆಸ್ತಿಪಾಸ್ತಿಗಳನ್ನು ಪೂರ್ತಿ ಕೊಳ್ಳೆ ಹೊಡೆದುಬಿಡುತ್ತಾರೆ. ನಮ್ಮ ಸಿಂಹಾಸನವೂ ಶತ್ರುವಿನದಾಗಿಬಿಡುತ್ತದೆ" ಎಂದನು ಚತುರಸೇನ.

ಮಗನು ಹೀಗೆ ಹೇಳಿದ ಮೇಲೆ ಸೂರ್ಯಸೇನನು ಕೋಟೆಯ ಗೋಡೆಗಳನ್ನು ಭದ್ರಪಡಿಸುವ ಕೆಲಸವನ್ನು ಕುರಿತು ಕೋಶಾಧಿಕಾರಿಯನ್ನು ಕರೆಯಿಸಿದನು. ಅವನು ಆ ಕೆಲಸಕ್ಕೆ ತಗಲುವ ಲೆಕ್ಕಗಳನ್ನು ಕಟ್ಟಿ ನೋಡಿದಾಗ, ಕೋಶಾಗಾರದಲ್ಲಿ ಅದಕ್ಕೆ ಬೇಕಾಗುವಷ್ಟು ಹಣವು ಇಲ್ಲವೆಂದು ಗೊತ್ತಾಯಿತು. ಯಾವ ಕೆಲಸಕ್ಕಾದರೂ ಮೊದಲು ಬೇಕಾದುದು ಹಣತಾನೇ ? ಕೋಶಾಗಾರವು ಖಾಲಿ

ಯಾಗುವುದು ಬಹು ದೊಡ್ಡ ಅಪಾಯ. ಈಗ ಏನು ಮಾಡಬೇಕೆಂದು ವೃದ್ಧ ರಾಜನು ಗಾಢಾಲೋಚನೆಗೆ ಬಿದ್ದನು. ಹಾಗಿರುವಾಗ ಸೇನಾ ನಾಯಕನು ಇಬ್ಬರು ಗೂಢಚಾರಿಗಳೊಂದಿಗೆ ಸೂರ್ಯಸೇನನ ಬಳಿಗೆ ಬಂದು, "ಮಹಾ ಪ್ರಭು, ನಮ್ಮ ಗೂಢಚಾರರ ಮುಖಾಂತರವಾಗಿ ಒಂದು ಹೊಸ ಸಮಾಚಾರ ತಿಳಿದುಬಂದಿದೆ. ಈಗ ಎರಡು ದಿನಗಳಿಂದ ಒಬ್ಬ ಸಾಧುಪುಂಗವನು ನಮ್ಮ ನಗರಕ್ಕೆ ಬಂದು ತಳವೂರಿದ್ದಾನೆ. ಅವನಲ್ಲಿ ಅದ್ಭುತವಾದ ಮಹಿಮೆಗಳಿವೆಯಂತೆ. ತನ್ನ ದರ್ಶನಕ್ಕೆ ಬಂದವರಿಗೆ ಅವರ ಪೂರ್ವಜರು ಅಡಗಿಸಿಟ್ಟ ಧನಗಳ ವಿವರಗಳನ್ನೆಲ್ಲ ಹೇಳುತ್ತಾನಂತೆ. ಹಾಗೆ ಅನೇಕರು ಅವನಿಂದ ಲಾಭಪಡೆದುದೂ ಗೊತ್ತಾಗಿದೆ. ತಾವು ಕೂಡಾ ಆ ಸಾಧುವನ್ನು ದರ್ಶನ ಮಾಡಿದರೆ ಉಪಯೋಗವಾಗಬಹುದು ಎಂದು ಇದನ್ನು ಮನವಿ ಮಾಡಿದೆನು" ಎಂದನು.

ವೃದ್ಧರಾಜ ಸೂರ್ಯಸೇನನಿಗೆ ಸೇನಾನಾಯಕನ ರಾಜಭಕ್ತಿಯಲ್ಲಿಯೂ, ಸಾಮರ್ಥ್ಯದಲ್ಲಿಯೂ ಗಟ್ಟಿ ನಂಬುಗೆ ಇದ್ದಿತು. ಅಂತಲೇ ಅವನು ಆ ಸಾಧುವಿನ ಬಳಿಗೆ ಹೋಗಿ, ತನಗೆ ಇದಿರಾಗಿರುವ ಸಮಸ್ಯೆಯನ್ನು ಕುರಿತು ಹೇಳಿದನು.

ಸಾಧು ಸ್ವಲ್ಪ ಹೊತ್ತು ಕಣ್ಣುಗಳನ್ನು ಮುಚ್ಚಿ, ಆಮೇಲೆ ತೆರೆದು–

"ಮಹಾರಾಜಾ, ನಾನು ಯೋಗದೃಷ್ಟಿಯಿಂದ ಎಲ್ಲವನ್ನೂ ಪರಿಶೀಲಿಸಿ ನೋಡಿದೆನು. ಈಗ ಯಾವುದೇ ನೆರೆಯ ರಾಜನಿಂದಲೂ ನಿನ್ನ ರಾಜ್ಯಕ್ಕೆ ಅಪಾಯವೇನಿಲ್ಲ. ಆದರೆ ಒಂದು ಸಂಗತಿ. ನಿನ್ನ ಪೂರ್ವಿಕರು ಕೋಟೆಯ ಪ್ರಧಾನ ದ್ವಾರದ ಎರಡು ಬದಿಗಳಲ್ಲಿಯೂ ಕೋಟೆಗೋಡೆಯ ಅಡಿಯಲ್ಲಿ ನೂರು ನಿಧಿಗಳ ಬಿಂದಿಗೆಗಳನ್ನು ನಿಕ್ಷೇಪಿಸಿದ್ದಾರೆ. ಅವುಗಳಲ್ಲಿ ತುಂಬಾ ಬಂಗಾರಗಳಿವೆ. ಅವುಗಳನ್ನು



ಅಗೆಯಿಸಿ ತೆಗೆದರೆ ನಿನ್ನ ಹಣದ ಸಮಸ್ಯೆ ಪರಿಹಾರವಾಗುತ್ತದೆ. ಇಂತಹ ಕಷ್ಟಗಳಿಗೆ ಉಪಯೋಗವಾಗಬೇಕೆಂಬ ಉದ್ದೇಶದಿಂದಲೇ ಪೂರ್ವಿಕರು ಹಾಗೆಲ್ಲಾ ಮಾಡಿಟ್ಟಿದ್ದಾರೆ. ಇದರಲ್ಲಿ ದೊಡ್ಡ ಆಶ್ಚರ್ಯಪಡತಕ್ಕದ್ದು ಏನೂ ಇಲ್ಲ. ನೀನು ನನ್ನನ್ನು ಕೇಳಿದ್ದು ಒಳ್ಳೆಯದಾಯಿತು, ಅಷ್ಟೇ" ಎಂದನು.

ರಾಜನು ಬಹಳ ತೃಪ್ತನಾಗಿ, ಸಾಧುವಿಗೆ ಭಕ್ತಿಪೂರ್ವಕ ನಮಸ್ಕಾರ ಮಾಡಿ ತನ್ನ ಭವನಕ್ಕೆ ಹಿಂದಿರುಗಿ ಬಂದನು.

ತಂದೆ ತೃಪ್ತಿಪಟ್ಟ ಸಂಗತಿಯನ್ನು ತಿಳಿದು ಯುವರಾಜನಿಗೆ ಬಹಳ ಆಶ್ಚರ್ಯವಾಯಿತು. "ಒಂದು ವೇಳೆ ಸಾಧು ಹೇಳಿದ ಮಾತು ನಿಜವೇ ಆದರೂ ಶತ್ರುರಾಜನ ದಾಳಿಯ ಅಪಾಯವಿರುವ ಈ ಪರಿಸ್ಥಿತಿಯಲ್ಲಿ ಕೋಟೆಯ ಗೋಡೆಗಳನ್ನು ಅಗೆಯಿಸುವ ಕೆಲಸ ಬುದ್ಧಿವಂತಿಕೆಯಾಗಲಾರದು. ಆ ಸಾಧು ನಿಧಿ ಇರುವುದಾಗಿ ಹೇಳಿದ ಪ್ರದೇಶದಲ್ಲಿ ಕೋಟೆಯ



ಗೋಡೆಗೆ ಯಾವ ಶೈಥಿಲ್ಯತೆಯೂ ಇಲ್ಲ. ಬಹಳ ಬಲವಾಗಿರುವ ಜಾಗವದು. ನಮ್ಮ ರಾಜ್ಯದಲ್ಲಿ ಕೋಟೆಯ ಗೋಡೆಯ ಬುಡದಲ್ಲಿ ಹೊರತು ಬೇರೆಲ್ಲಿಯೂ ಧನವಿಲ್ಲವೆ? ಮೊದಲು ಆ ಸಾಧುವಿಗಿರುವ ಮಹಿಮೆಗಳೇನೆಂದು ಪರೀಕ್ಷೆ ಮಾಡಲು ನನಗೆ ಆರು ದಿನಗಳ ಅವಕಾಶ ಕೊಡಿರಿ. ಸಾಕು" ಎಂದನು ಚತುರಸೇನ.

ಸೂರ್ಯಸೇನನು ಹಾಗೆಯೇ ಆಗಲೆಂದು ಅದಕ್ಕೆ ಅನುಮತಿ ನೀಡಿದನು.

ಆಮೇಲೆ ಯುವರಾಜನು ಆಸ್ಥಾನದ ವಿದೂಷಕನೊಂದಿಗೆ ರಹಸ್ಯವಾಗಿ ಮಾತಾಡಿ, ಅವನ ಮನೆಯ ಹಿಂಬದಿಯ ಮೂಡು ದಿಕ್ಕಿನ ನೆಲದಲ್ಲಿ, ಒಂದು ಸಾವಿರ ಬಂಗಾರದ ನಾಣ್ಯಗಳನ್ನು ಹುಗಿದಿಡಿಸಿದನು. ಆಮೇಲೆ ವಿದೂಷಕನು ಆ ಸಾಧುವಿನ ಬಳಿಗೆ ಹೋಗಿ, ಸಾಷ್ಟಾಂಗ ನಮಸ್ಕಾರ ಮಾಡಿ, "ಮಹಾಸ್ವಾಮಿ, ನಾನು ಅಷ್ಟಿಷ್ಟೆಂದು ಹೇಳಲಾಗದ ದೀನನಾಗಿದ್ದೇನೆ. ಹಣದ ಕಷ್ಟ ಮೇರೆ ಮೀರಿ ಹೋಗಿದೆ. ಒಂದು ಸಾವಿರ ವರಹಗಳಾದರೂ ಇದ್ದಹೊರತು ಹಣದ ಇಕ್ಕಟ್ಟಿನಿಂದ ಹೊರ ಬೀಳಲಾರೆನು. ನೀವು ಎಷ್ಟೋ ಜನರಿಗೆ ಅವರವರ ಮನೆಯ ವಠಾರದಲ್ಲೇ ಪೂರ್ವಿಕರ ಹಣ ಸಿಗುವ ಹಾಗೆ ಮಾಡಿದ್ದೀರಿ. ನನ್ನ ಮೇಲೆ ದಯವಿಟ್ಟು ನನ್ನ ಪೂರ್ವಿಕರು ನನಗೇನಾದರೂ ಇಟ್ಟಿದ್ದಾರೆಯೇ ಎಂಬುದನ್ನು ಹೇಳಬೇಕು. ನನ್ನ ಕಷ್ಟ ಪರಿಹಾರ ನಿಮ್ಮಿಂದಲೇ ಆಗಬೇಕು ಸ್ವಾಮೀ!" ಎಂದು ದೈನ್ಯತೆಯಿಂದ ಕೇಳಿಕೊಂಡನು.

ಸಾಧು ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಸುಮ್ಮನಿದ್ದು, "ಅಪ್ಪಾ, ಈ ದಿನ ನಾನು ಯೋಗ ದೃಷ್ಟಿಯನ್ನು ತಂದುಕೊಳ್ಳುವ ವೇಳೆ ದಾಟಿ ಹೋಯಿತು, ನಾಳೆ ಬೆಳಗ್ಗೆ ಬಾ. ನಿನ್ನ ಮನೆಯ ವಠಾರದಲ್ಲಿ ನಿಧಿ ಇದೆಯೋ ಇಲ್ಲವೋ ನೋಡಿ ಹೇಳುತ್ತೇನೆ" ಎಂದನು.

ಯುವರಾಜ ಚತುರಸೇನನು ಆ ದಿನ ರಾತ್ರಿಯಲ್ಲಿ ರಹಸ್ಯವಾಗಿ ವಿದೂಷಕನ ಮನೆಗೆ ಹೋದನು. ಸುಮಾರು ಅರ್ಧರಾತ್ರಿ ಕಳೆದ ಮೇಲೆ ಇಬ್ಬರು ಮನುಷ್ಯರು ಹಿಂಬದಿಯ ಗೋಡೆಯನ್ನೇರಿ ಒಳಗೆ ಧುಮುಕಿದುದನ್ನು ವಿದೂಷಕನೂ ಯುವರಾಜನೂ ನೋಡಿದರು. ಹಾಗೆ ಹಾರಿಬಂದವರು ಸೇನಾನಿಯೊಂದಿಗೆ ರಾಜನ ಬಳಿಗೆ ಬಂದ ಇಬ್ಬರು ಗೂಢಚಾರಿಗಳೆಂದೂ ಗೊತ್ತಾಯಿತು.

ಅವರಿಬ್ಬರೂ ಮನೆಯ ಹಿಂದೆ ಪಶ್ಚಿಮ ದಿಕ್ಕಿನಲ್ಲಿರುವ ಮಾವಿನಮರದಕೆಳಗೆ ಹೊಂಡ ತೆಗೆದು ಏನನ್ನೋ ಹುಗಿದಿಟ್ಟು, ನೆಲದ ಮೇಲೆ ಗುರುತು ತಿಳಿಯದಂತೆ ಮಣ್ಣು ಮುಚ್ಚಿ ಮೊದಲಿನಂತೆ ಮಾಡಿ ಹೊರಟು ಹೋಗಿಬಿಟ್ಟರು.

ಅವರು ಅತ್ತ ಹೋದ ಕೂಡಲೇ ಯುವರಾಜನೂ ವಿದೂಷಕನೂ ಅಲ್ಲಿಗೆ ಹೋಗಿ, ಹೊಂಡ

ವನ್ನು ಕೆದರಿ ನೋಡಿದರು. ಒಂದು ತಾಮ್ರದ ಬಿಂದಿಗೆಯಲ್ಲಿ ಸಾವಿರ ಬಂಗಾರದ ನಾಣ್ಯಗಳಿದ್ದುವು. ಅದನ್ನು ಹಾಗೆಯೇ ನೆಲದೊಳಗೇ ಇಟ್ಟುಬಿಟ್ಟರು.

ಮರುದಿನ ಬೆಳಿಗ್ಗೆ ವಿದೂಷಕನು ಸಾಧುವಿನ ಬಳಿಗೆ ಹೋದನು. ಸಾಧು ಅವನೊಂದಿಗೆ, "ಅಪ್ಪಾ, ನಿನ್ನ ಮನೆಯಲ್ಲಿ ನಿಧಿ ಏನಾದರೂ ಇದೆಯೋ ಎಂದು ಯೋಗದೃಷ್ಟಿಯನ್ನು ಹರಿಸಿ ನೋಡಿದೆನು. ಒಂದು ಸಣ್ಣ ತಾಮ್ರದ ಬಿಂದಿಗೆಯಲ್ಲಿ ಬಂಗಾರದ ನಾಣ್ಯಗಳು ಕಾಣುತ್ತವೆ. ನಿನ್ನ ಮನೆಯ ಹಿಂದೆ ಪಶ್ಚಿಮ ಬದಿಯಲ್ಲಿರುವ ಮಾವಿನ ಮರದ ಬುಡದಲ್ಲಿ ಆ ನಿಧಿ ಇದೆ. ಅಗೆದು ತೆಗೆದುಕೊಂಡು ನಿನ್ನ ಕಷ್ಟ ಪರಿಹಾರ ಮಾಡಿಕೋ" ಎಂದು ಹೇಳಿದನು.

ವಿದೂಷಕನು ರಾಜಭವನಕ್ಕೆ ಹಿಂದಿರುಗಿ ಬಂದು ಸಾಧು ಹೇಳಿದ ಮಾತನ್ನು ಯುವರಾಜನೊಂದಿಗೆ ಹೇಳಿದನು. ಯುವರಾಜನು ವಿದೂಷಕನನ್ನು ಕರೆದುಕೊಂಡು ತಂದೆಯ ಬಳಿಗೆ ಹೋಗಿ ನಡೆದ ಸಂಗತಿಯನ್ನೆಲ್ಲಾ ಹೇಳಿ, "ಅಪ್ಪಾ, ಈ ಸಾಧು ನಿಜಕ್ಕೂ ಮಹಿಮೆಯುಳ್ಳವನಾಗಿರುತ್ತಿದ್ದರೆ, ನಾವು ಹುಗಿದಿಟ್ಟ ಧನವನ್ನಾದರೂ ಹೇಳಬೇಕಿತ್ತು. ಅವನು ಹುಗಿದಿಡಿಸಿದುದನ್ನೇ ಹೇಳಿದ್ದಾನೆ. ಅವನು ಶತ್ರುವಿನ ಗೂಢಚಾರಿಯೇ ಎಂದು ನಾವು ಖಂಡಿತ ಮಾಡಿಕೊಳ್ಳಲು ಯಾವ ಅಡ್ಡಿಯೂ ಇಲ್ಲ. ನಮ್ಮ ಸೇನಾನಾಯಕನೂ ನಮ್ಮ ಕೆಲವು ಗೂಢಚಾರರೂ ಕೂಡಿ ನಿಧಿ ನಿಕ್ಷೇಪವೆನ್ನುತ್ತ ಧನವನ್ನು ಹುಗಿದು ಜನರನ್ನು ಮೋಸಪಡಿಸುತ್ತಿದ್ದಾರೆ. ನಿಧಿ ಇರುವುದೆಂಬ ನೆಪದಿಂದ ಬಲವಾಗಿರುವ ನಮ್ಮ ಕೋಟೆಯ ಮುಖದ್ವಾರವನ್ನು ಜರಿಸಿ ಹಾಕಿಸಿಬಿಡುವುದು ಶತ್ರುಗಳ ತಂತ್ರದ ಒಂದು ಭಾಗವಾಗಿದೆ" ಎಂದನು.

ಇದನ್ನು ಕೇಳಿದ ಮೇಲೆ ಸೂರ್ಯಸೇನ ರಾಜನಿಗೆ ಸೇನಾನಾಯಕನ ರಾಜಭಕ್ತಿ, ವಿಶ್ವಾಸಗಳ ಮೇಲೆ ಸ್ವಲ್ಪ ಅನುಮಾನ ಬಂದಿತು. ಆದರೂ ಅವನನ್ನು



ಕೂಡಲೇ ಬಂಧಿಸಲು ಆಜ್ಞೆಮಾಡದೆ, ಯುವರಾಜನೊಂದಿಗೆ, "ಆ ಸಾಧುರೂಪದಲ್ಲಿ ಬಂದ ಗೂಢಚಾರನು ನಗರದೊಳಗಿನ ಅನೇಕರನ್ನು ತನ್ನ ಸುಳ್ಳು ಮಹಿಮೆಗಳನ್ನು ತೋರಿಸಿ ಮೋಸಪಡಿಸಿದ ಹಾಗೆ ನಮ್ಮ ಸೇನಾನಾಯಕನನ್ನು ಕೂಡಾ ಮೋಸಪಡಿಸಿರಬಹುದಷ್ಟೆ? ಅವನ ರಾಜಭಕ್ತಿಯನ್ನು ಶಂಕಿಸಲು ನನ್ನ ಮನಸ್ಸು ಒಪ್ಪುವುದಿಲ್ಲಪ್ಪ" ಎಂದನು.

"ಹಾಗಾದರೆ ಈ ದಿನ ರಾತ್ರಿ ಒಂದು ಕೆಲಸ ಮಾಡೋಣ. ನಾವು ಮಾರುವೇಷಗಳಲ್ಲಿ ಆ ಸಾಧು ಇರುವ ಮನೆಗೆ ಹೋಗಿ, ಅವನನ್ನು ನೋಡಲು ಬರುವವರಲ್ಲಿ ನಮ್ಮ ಗೂಢಚಾರಿಗಳಾರಾದರೂ ಇದ್ದರೆ ಅವರನ್ನು ಬಂಧಿಸೋಣ. ಆಮೇಲೆ ಅವರಿಂದ ನಿಜಸಂಗತಿ ಕಕ್ಕಿಸುವುದೇನೂ ಕಷ್ಟವಿಲ್ಲ" ಎಂದನು ಯುವರಾಜ.

ಇದಕ್ಕೆ ರಾಜನು ಒಪ್ಪಿದನು. ಇಬ್ಬರೂ ಆ ದಿನ ರಾತ್ರಿ ಬೇರೆ ಬೇರೆ ವೇಷ ಹಾಕಿಕೊಂಡು ಸಾಧುವಿನ

ಮನೆಗೆ ಹೋದರು. ಅವರು ತಮ್ಮೊಂದಿಗೆ ಕರೆತಂದ ಸೈನಿಕರನ್ನು ದೂರದಲ್ಲಿ ಅಡಗಿರಲು ಹೇಳಿ, ಸಾಧುವಿನ ಮನೆಯ ತೆರೆದ ಕಿಟಿಕಿಯ ಹಿಂದೆ ಹೊಂಚಿ ಗಮನಿಸುತ್ತ ನಿಂತರು.

ಸ್ವಲ್ಪ ಹೊತ್ತಿಗೆ ಸೇನಾನಾಯಕನು ಇಬ್ಬರು ಅನುಚರರೊಂದಿಗೆ ಅಲ್ಲಿಗೆ ಬಂದನು. ಸಾಧು ಅವನನ್ನು ನೋಡಿದ ಕೂಡಲೇ "ರಾಜನು ನಮ್ಮ ಯೋಗದೃಷ್ಟಿಯನ್ನು ಪೂರ್ತಿ ನಂಬಿದಂತೆ ತಾನೇ ?" ಎಂದು ಕೇಳಿದನು.

"ಹೌದು. ಪೂರ್ತಿ ನಂಬಿದ್ದಾನೆ. ಇನ್ನೇನೂ ಸಂದೇಹ ಬೇಡ. ವಿದೂಷಕನ ಮನೆಯ ಹಿಂದೆ ನಿಧಿ ಸಿಕ್ಕಿದ್ದರಿಂದ, ಬೇರೆ ಉದ್ಯೋಗಸ್ಥರು ಕೂಡಾ ನಿಮ್ಮ ಮಹಿಮೆ ನಂಬುವಂತಾಗಿದೆ. ಇನ್ನು ಎರಡು ದಿನಗಳಲ್ಲಿ ರಾಜನು ನಿಧಿಗಾಗಿ ಕೋಟೆಯ ಮುಖದ್ವಾರವನ್ನು ಅಗೆಯಿಸಿ ಅದರ ಬುನಾದಿಗೆ ಕೈಹಾಕಿಸುತ್ತಾನೆ" ಎಂದನು ಸೇನಾನಾಯಕ.

ಅಷ್ಟು ಕೇಳಿದ ಕೂಡಲೇ ರಾಜನೂ, ಯುವರಾಜನೂ ಈಚೆಗೆ ಬಂದು ಅಡಗಿಕೊಂಡಿದ್ದ ಸೈನಿಕರನ್ನು ಎಚ್ಚರಿಸಿದರು. ಅವರು ಧಾವಿಸಿ ಬಂದು ಸಾಧುವನ್ನೂ, ಸೇನಾನಾಯಕನನ್ನೂ, ಅವರ ಅನುಚರರನ್ನೂ ಓಡಲು ಬಿಡದೆ ಹಿಡಿದು ಬಂಧಿಸಿ ಒಯ್ದು ಕಾರಾಗಾರದಲ್ಲಿ ಕೆಡವಿದರು.

ರಾಜನೂ ಯುವರಾಜನೂ ಅಲ್ಲಿಂದ ರಾಜಭವನಕ್ಕೆ ಹಿಂದಿರುಗಿ, ಮಂತ್ರಿಯನ್ನು ಬರಮಾಡಿಕೊಂಡರು. "ಮಹಾಮಂತ್ರೀ, ನಿಮ್ಮ ಸಲಹೆಯಂತೆ ನಾನು ಮೊದಲೇ ಯುವರಾಜನಿಗೆ ಪಟ್ಟಾಭಿಷೇಕ ಮಾಡಿ ಭಾರ ಹಾಕುತ್ತಿದ್ದರೆ ಒಳ್ಳೆಯದೇ ಆಗುತ್ತಿತ್ತು. ಈ ದುಷ್ಟರು ನಾವು ನಿಧಿಯ ಭ್ರಮೆಯಲ್ಲಿ ಕೋಟೆಯ ಗೋಡೆಯನ್ನು ಬೀಳಿಸಿದ ಮೇಲೆ ದಾಳಿ ತೆಗೆದುಕೊಂಡು ಬರುವಂತೆ ವಿದೇಹ ರಾಜನಿಗೆ ಹೇಳುತ್ತಿದ್ದರು. ಈಗ ದೊಡ್ಡ ಅಪಾಯವು ತಪ್ಪಿತು. ಬೇಗದಲ್ಲೇ ಯುವರಾಜನಿಗೆ ಪಟ್ಟಾಭಿಷೇಕಕ್ಕೆ ಏರ್ಪಾಡು ಮಾಡಿರಿ" ಎಂದು ಹೇಳಿದನು.

ಮುಂದೆ ಎಂಟುದಿನದಲ್ಲಿ ಯುವರಾಜ ಚತುರಸೇನನಿಗೆ ಪಟ್ಟಾಭಿಷೇಕವಾಯಿತು. ಅವನು ರಾಜನಾದ ಕೂಡಲೇ ಹಿಂದಿನ ಅನುಭವಗಳನ್ನು ಮರೆಯದೆ, ಗೂಢಚಾರಿಯ ಶಾಖೆಯನ್ನು ತನ್ನ ಅಧೀನದಲ್ಲೇ ಇಟ್ಟುಕೊಂಡನು.

ತನ್ನ ತಂತ್ರವೆಲ್ಲಾ ಭಗ್ನವಾದುದರಿಂದ ವಿದೇಹ ರಾಜನು ಹತಾಶನಾದನು. ಅವನ ಯುದ್ಧದ ಪ್ರಯತ್ನ ಅಂತರಿಸಿ ಹೋಯಿತು.

ತನ್ನ ಮಗನ ಶಕ್ತಿಸಾಮರ್ಥ್ಯಗಳನ್ನು ಸ್ವತಃ ನೋಡಿದ ವೃದ್ಧರಾಜನು ನಿಶ್ಚಿಂತೆಯಾಗಿ ವಿಶ್ರಾಂತಿಯನ್ನು ಅನುಭವಿಸಿಕೊಂಡಿದ್ದನು.





# ಚಿನ್ನದನವಿಲು

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಆಳಿಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಕಾಶೀರಾಜ್ಯದಲ್ಲಿ ಒಂದು ನವಿಲಾಗಿ ಜನ್ಮವೆತ್ತಿದನು. ಅದು ಇತರ ನವಿಲುಗಳಂತೆ ಸಾಧಾರಣ ನವಿಲಾಗಿರಲಿಲ್ಲ. ಅಪರೂಪವೆಂಬಂತಹ ಅಪ್ಪಟ ಪುತ್ಥಳಿಚಿನ್ನದ ನವಿಲು ಅದು, ಕಾಶೀ ರಾಜ್ಯದಲ್ಲಿ ಜನ್ಮವೆತ್ತಿದರೂ ದಂಡಕಾರಣ್ಯದಲ್ಲಿ ವಿಹರಿಸಿಕೊಂಡಿದ್ದಿತು.

ಒಂದು ದಿನ ಕಾಶೀರಾಜನ ಪತ್ನಿಯರಲ್ಲಿ ಒಬ್ಬಳಿಗೆ ಈ ಚಿನ್ನದನವಿಲು ಸ್ವಪ್ನದಲ್ಲಿ ದರ್ಶನವಿತ್ತಿತು. ಅವಳು ಅದನ್ನು ಗಂಡನೊಂದಿಗೆ ಹೇಳಿ, ಆ ನವಿಲನ್ನು ತರಿಸಿಕೊಡಬೇಕೆಂದಳು. ರಾಜನು ಮಂತ್ರಿಗಳೊಂದಿಗೆ ವಿಚಾರಿಸಿದನು. ಮಂತ್ರಿಗಳು ಬ್ರಾಹ್ಮಣರನ್ನು ಕೇಳಬೇಕೆಂದರು. ಬ್ರಾಹ್ಮಣರನ್ನು ಕೇಳಿದರೆ ಅದರ ಸಂಗತಿ ಬೇಟೆಗಾರರಿಗೆ ಗೊತ್ತಿದ್ದೀತು ಎಂದರು.

ರಾಜನು ದಂಡಕಾರಣ್ಯಕ್ಕೆ ಸಮೀಪದಲ್ಲಿರುವ ಒಬ್ಬ ಬೇಟೆಗಾರನನ್ನು ಕರೆಯಿಸಿ, "ಹೀಗೆ ಹೀಗೆ ಇರುವ ಚಿನ್ನದನವಿಲನ್ನು ಜೀವದೊಂದಿಗೆ ಹಿಡಿದು ತಂದುಕೊಟ್ಟರೆ ದೊಡ್ಡ ಬಹುಮಾನ ಕೊಡುತ್ತೇನೆ' ಎಂದು ಹೇಳಿದನು. ಅದಕ್ಕೆ ಒಪ್ಪಿಕೊಂಡ ಬೇಟೆಗಾರನು ಕ್ರಮವಾಗಿ ಏಳು ವರ್ಷಗಳವರೆಗೆ ಆ ನವಿಲಿಗಾಗಿ ಹೊಂಚುಹಾಕಿದನು. ನವಿಲು ಅವನ ಬಲೆಗೆ ಸಿಕ್ಕಿಬೀಳಲೇ ಇಲ್ಲ. ಆ ಬೇಟೆಗಾರ ಸತ್ತೂ ಆಯಿತು. ನವಿಲನ್ನು ಕೇಳಿದ ಆ ರಾಣಿಯೂ ಸತ್ತಳು.

"ಕನಸಿನಲ್ಲಿ ಕಂಡ ಒಂದು ನವಿಲಿಗಾಗಿ ಕಳವಳಪಡುತ್ತ ನನ್ನ ರಾಣಿ ಸತ್ತು ಹೋದಳಲ್ಲಾ !" ಎಂದುಕೊಂಡು ರಾಜನಿಗೆ ಕೋಪ ಬಂದಿತು. "ದಂಡಕಾರಣ್ಯದಲ್ಲಿ ಚಿನ್ನದ ನವಿಲು ಸಂಚರಿಸಿಕೊಂಡೇ ಇದೆ. ಯಾರು ಅದರ ಮಾಂಸ ತಿನ್ನುವರೋ ಅವರಿಗೆ ಜರಾಮರಣಗಳು ಬಾರವು" ಎಂದು ಒಂದು ಪ್ರಕಟನೆಯನ್ನು ಬರೆಯಿಸಿ ಮಹಾದ್ವಾರದ ಮೇಲೆ ಎಲ್ಲರಿಗೂ ಕಾಣುವಂತೆ ನೇತಾಡಿಸಿಟ್ಟನು ಆ ರಾಜ.

ಆ ರಾಜನು ತೀರಿಹೋದ ಮೇಲೆ, ಮತ್ತೆ ಬಂದ ಯುವರಾಜನು, ಚಿನ್ನದ ನವಿಲನ್ನು ಹಿಡಿಸಲು ಮತ್ತೊಬ್ಬ ಬೇಟೆಗಾರನನ್ನು ನಿಯಮಿಸಿದನು. ಪ್ರಯೋಜನವಾಗಲಿಲ್ಲ. ಹೀಗೆ ಆರು ತಲೆಮಾರುಗಳು ಹೋದುವು.

ಏಳನೇ ತಲೆಮಾರಿನ ರಾಜನು ಕೂಡಾ ದ್ವಾರದ ಮೇಲಿನ ಪ್ರಕಟನೆಯನ್ನು ಓದಿ ನೋಡಿ ಬೇಟೆಗಾರ

ಜಾತಕಕಥೆ

ನೊಬ್ಬನನ್ನು ಚಿನ್ನದ ನವಿಲನ್ನು ಹಿಡಿಯಲು ಕಳುಹಿಸಿದನು. ಈಸಾರಿ ಹೊಂಚುಹಾಕಿದ ಬೇಟೆಗಾರನ ಬಲೆಗೆ ಆ ನವಿಲು ಸಿಕ್ಕಿಬಿತ್ತು. ಅವನು ಅದನ್ನು ತಂದು ಕಾಶೀ ರಾಜನಿಗೆ ಒಪ್ಪಿಸಿದನು.

ಆ ಚಿನ್ನದ ಬಣ್ಣದಲ್ಲಿ ಹೊಳೆಯುವ ನವಿಲನ್ನು ನೋಡಿದ ಕೂಡಲೇ ರಾಜನಿಗೆ ಆಶ್ಚರ್ಯವಾಯಿತು. ನವಿಲಿನ ಮೇಲೆ ಗೌರವ ಭಾವ ಬಂತು. ಅದಕ್ಕೆ ತನ್ನ ಪಕ್ಕದಲ್ಲೇ ಎತ್ತರವಾದ ಸಿಂಹಾಸನವನ್ನು ಇಡಿಸಿದನು.

ಈಗ ನವಿಲಿನ ರೂಪದಲ್ಲಿರುವ ಬೋಧಿಸತ್ವನು, "ರಾಜಾ, ನನ್ನನ್ನು ಏತಕ್ಕಾಗಿ ಹಿಡಿಸಿ ತರಿಸಿರುವಿ ?" ಎಂದು ಪ್ರಶ್ನಿಸಿದನು.

"ನಿನ್ನ ಮಾಂಸವನ್ನು ತಿಂದರೆ ಜರಾಮರಣಗಳು ಇಲ್ಲವೆಂದು ಹೇಳುತ್ತಾರೆ" ಎಂದನು ರಾಜ.

"ಅಂದರೆ ನನ್ನನ್ನು ಕೊಲ್ಲಿಸುವಿಯೇನು ?" ಎಂದು ಕೇಳಿದನು ಬೋಧಿಸತ್ವ.

"ಹೌದು" ಎಂದನು ರಾಜ.

"ಹುಚ್ಚಾ ! ನನಗೆ ಮರಣವು ನಿಜವೆಂದಾದರೆ ನನ್ನ ಮಾಂಸ ತಿಂದವರಿಗೆ ಸಾವು ಬರುವುದಿಲ್ಲವೆಂಬುದೇನು ಅರ್ಥ ?" ಎಂದು ಪುನಃ ಕೇಳಿದನು ಬೋಧಿಸತ್ವ. ಅದನ್ನು ಕೇಳಿ ರಾಜನು, ಸ್ವಲ್ಪ ಯೋಚಿಸಿ, "ನೀನು ಅಪೂರ್ವವಾದ ಚಿನ್ನದ ನವಿಲು. ಆದ್ದರಿಂದ ನಿನ್ನ ಮಾಂಸ ತಿಂದವರಿಗೆ ಸಾವು ಬಾರದೆಂದು ಹೇಳುತ್ತಾರೆ" ಎಂದನು.

"ಹಾಗಾದರೆ ರಾಜಾ, ನನಗೆ ಈ ಚಿನ್ನದ ಬಣ್ಣ ಬಂದ ಕಾರಣ ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ನಾನು ಈ ರಾಜ್ಯಕ್ಕೆ ಮಹಾರಾಜನಾಗಿದ್ದವನು. ನನ್ನ ನ್ಯಾಯ ರೀತಿಯ ಪರಿಪಾಲನೆಯಿಂದ ಧರ್ಮವು ಸರಿಯಾಗಿ ನಿಂತುಕೊಂಡಿತ್ತು. ಅದರ ಫಲದಿಂದ ಈ ಜನ್ಮದಲ್ಲಿ ಚಿನ್ನದನವಿಲಾಗಿ ಹುಟ್ಟಿದ್ದೇನೆ" ಎಂದನು ಬೋಧಿಸತ್ವ.

ಕಾಶೀರಾಜನು ಬೆರಗಾಗಿ "ಏನಿದು ! ಧರ್ಮ ಪರಿಪಾಲನೆಯ ಫಲಿತವೋ ಇದು ! ಹೇಗೆ ನಂಬಲಿ ? ನಿನ್ನ ಮಾತಿಗೆ ರುಜುವೇನಾದರೂ ಇದೆಯೇ ?" ಎಂದು ಕೇಳಿದನು.

"ಇಲ್ಲದೇ ಉಂಟೆ ? ನಾನು ಮಹಾರಾಜನಾಗಿದ್ದ ಕಾಲದಲ್ಲಿ, ನವರತ್ನಖಚಿತವಾದ ದಿವ್ಯರಥದ ಮೇಲೆ ವಿಹಾರ ಮಾಡುತ್ತಿದ್ದೆನು. ಆ ರಥವು ಉದ್ಯಾನದ ಹತ್ತಿರವಿರುವ ಕೊಳದ ಬದಿಯಲ್ಲಿ ಹೂತುಹೋಗಿದೆ" ಎಂದನು ಬೋಧಿಸತ್ವ.

ಕಾಶೀರಾಜನು ಕೊಳದ ಪಕ್ಕದಲ್ಲಿ ಅಗೆಯಿಸಿದಾಗ ಹುಗಿಯಲ್ಪಟ್ಟ ದಿವ್ಯ ರಥವು ಕಾಣಿಸಿತು.

ಅಂದಿನಿಂದ ಆ ರಾಜನು ಬೋಧಿಸತ್ವನನ್ನು ತನ್ನ ಗುರುವಾಗಿ ಭಾವಿಸಿಕೊಂಡಿದ್ದನು.






## ನಮ್ಮ ನದಿಗಳು :

# ಗಂಗಾ – ೨

ಅಯೋಧ್ಯೆಗೆ ರಾಜನಾದ ಸಗರನು ಒಂದು ಸಾರಿ ಯಜ್ಞ ಮಾಡಲು ಸಿದ್ಧನಾದನು. ಆಚಾರದಂತೆ ಅಲಂಕರಿಸಲ್ಪಟ್ಟ ಬಲಿಷ್ಠವಾದ ಕುದುರೆಯ ಮೇಲೆ ಧ್ವಜವನ್ನು ನಿಲ್ಲಿಸಿ, ಮುಂದೆ ಬಿಟ್ಟು ಅದರ ಹಿಂದೆ ರಾಜಕುಮಾರರೂ ಸೈನಿಕರೂ ಪ್ರಯಾಣ ಮಾಡಿದರು. ಯಜ್ಞಾಶ್ವವು ಅನೇಕ ರಾಜ್ಯಗಳಿಗೆ ಹೋಯಿತು.

ಅಶ್ವರಕ್ಷಕರು ಗಮನ ತಪ್ಪಿದ ಸಮಯ ನೋಡಿ ಇಂದ್ರನು ರಾಕ್ಷಸ ರೂಪದಲ್ಲಿ ಬಂದು ಆ ಕುದುರೆಯನ್ನು ಕದ್ದುಕೊಂಡು ಹೋಗಿ, ಪಾತಾಳದಲ್ಲಿರುವ ಕಪಿಲನ ಆಶ್ರಮದಲ್ಲಿ ಕಟ್ಟಿದನು.





ಸಗರನ ಅರುವತ್ತು ಸಾವಿರ ಕುಮಾರರು ನಾಲ್ಕು ದಿಕ್ಕುಗಳಲ್ಲಿ ತಿರುಗುತ್ತಾ, ಪಾತಾಳಕ್ಕೆ ಹೋಗಿ ಅಲ್ಲಿ ತಮ್ಮ ಕುದುರೆ ಇರುವುದನ್ನು ಕಂಡರು. ಕಪಿಲಮುನಿಯೇ ತಮ್ಮ ಕುದುರೆಯನ್ನು ಅಪಹರಿಸಿದನೆಂದುಕೊಂಡು, ಆ ರಾಜಕುಮಾರರು ನಿರ್ದೋಷಿಯಾದ ಕಪಿಲನನ್ನು ಅವಮಾನಿಸಿದರು.



ಅವರ ದುಡುಕತನವು ಕಪಿಲನಿಗೆ ಮಹಾ ಕೋಪವನ್ನುಂಟುಮಾಡಿತು. ದುರಹಂಕಾರಿಗಳಾದ ಅವರೆಲ್ಲರೂ ಭಸ್ಮವಾಗುವಂತೆ ಶಪಿಸಿದನು. ಮರುಕ್ಷಣದಲ್ಲಿ ರಾಜಕುಮಾರರೆಲ್ಲಾ ಸುಟ್ಟು ಹೋದರು.

ಮುಂದೆ ಅನೇಕ ವರ್ಷಗಳು ಕಳೆದ ಮೇಲೆ. ಸಗರನ ಮೊಮ್ಮಗನಾದ ಅಂಶುಮಂತನು ತಮ್ಮ ತಂದೆಯರನ್ನು ಬದುಕಿಸುವಂತೆ ಕಪಿಲನನ್ನು ಪ್ರಾರ್ಥಿಸಿದನು. ಬ್ರಹ್ಮ ಕಮಂಡಲುವಿನ ಪವಿತ್ರ ಗಂಗಾ ಜಲವು ಅಲ್ಲಿರುವ ಭಸ್ಮರಾಶಿಯನ್ನು ಸ್ಪರ್ಶಿಸಿದರೆ ಮಾತ್ರ ಸಗರ ಕುಮಾರರು ಪುನರುಜ್ಜೀವಿತರಾಗುವರೆಂದು ಕಪಿಲನು ಹೇಳಿದನು.






ಮತ್ತೆ ಕಾಲವು ಕ್ರಮಿಸಿದ ಮೇಲೆ ಸಗರನ ಮರಿಮೊಮ್ಮಗನಾದ ಭಗೀರಥನು ಭಸ್ಮರಾಶಿಯಾಗಿರುವ ತನ್ನ ಪೂರ್ವಿಕರನ್ನು ಬದುಕಿಸಿಕೊಳ್ಳಲು ಹಟಹಿಡಿದು ಬ್ರಹ್ಮನನ್ನು ಧ್ಯಾನಿಸಿ ದೊಡ್ಡ ತಪಸ್ಸು ಮಾಡಿದನು. ಬ್ರಹ್ಮನು ಸಂತೋಷಪಟ್ಟು, ತನ್ನ ಕಮಂಡಲುವಿನ ಗಂಗಾ ಜಲವನ್ನು ಹೊರಗೆ ಬಿಡಲು ಒಪ್ಪಿದನು.

ಆದರೂ ಉದ್ಧೃತವಾದ ಗಂಗಾ ಜಲದ ಪ್ರವಾಹ ವನ್ನು ತಡೆದುಕೊಳ್ಳುವ ಶಕ್ತಿ ಭೂಮಿಗೆ ಇಲ್ಲ. ಆ ವೇಗವನ್ನು ತಡೆದುಕೊಳ್ಳುವ ಶಕ್ತಿ ಶಿವನಿಗೆ ಮಾತ್ರವೇ ಇದೆ ಎಂದು ಭಗೀರಥನಿಗೆ ಗೊತ್ತಾ ಯಿತು. ಅಂತಲೇ ಅವನು ಶಿವನನ್ನು ಬೇಡಿ ಕೊಂಡನು. ಅವನ ಪ್ರಾರ್ಥನೆಗೆ ಶಿವನು ಒಪ್ಪಿ, ಗಂಗೆಯನ್ನು ತನ್ನ ತಲೆಯ ಮೇಲೆ ಇಳಿಸಿ ಕೊಂಡನು.






ಶಿವನ ತಲೆಯಿಂದ ಭೂಮಿಗಿಳಿದ ಗಂಗೆ, ಭಗೀರಥನ ಹಿಂದೆಯೇ ಹರಿದು ಹೋದಳು. ಹೀಗೆ ಭೂಮಿಯಲ್ಲಿ ತಿರುಗಿ ತಿರುಗಿ ಹರಿದ ಗಂಗೆ ಯಿಂದ ನೆಲವು ಸಸ್ಯಶ್ಯಾಮಲವಾಯಿತು.

ಭಗೀರಥನು ಗಂಗಾಪ್ರವಾಹವನ್ನು ಪಾತಾಳಕ್ಕೆ ನಡೆಸಿಕೊಂಡು ಹೋದನು. ಕಪಿಲನ ಆಶ್ರಮ ದಲ್ಲಿದ್ದ ಭಸ್ಮರಾಶಿಗಳು ಗಂಗಾ ಜಲದಲ್ಲಿ ಮುಳು ಗಿದುವು. ಕೂಡಲೇ ಅರುವತ್ತು ಸಾವಿರ ಮಂದಿ ಸಗರ ಪುತ್ರರು ಜೀವದೊಂದಿಗೆ ಎದ್ದು ಬಂದರು. ಭಗೀರಥನ ಪ್ರಯತ್ನವು ಸಫಲವಾಯಿತು.





ನಮ್ಮ ದೇಶದಲ್ಲಿ ಗಂಗಾ ನದಿ ಅತಿ ಪವಿತ್ರ ವೆಂದು ಪ್ರಸಿದ್ಧವಾಗಿದೆ. ಗೋಮುಖದಿಂದ ರೂಪ ಪಡೆದು ಗಂಗೋತ್ರಿಯಲ್ಲಿ ಆವಿರ್ಭವಿಸಿ ಪುರಾತನ ಪವಿತ್ರ ಕ್ಷೇತ್ರವಾಗಿರುವ ಹೃಷೀಕೇಶ ದಿಂದ ಸಾನುಭೂಮಿಗಳ ಮೇಲೆ ಗಂಗಾ ನದಿ ಹರಿಯುತ್ತದೆ.

ಗಂಗಾನದಿಯ ತೀರದಲ್ಲಿರುವ ಅನೇಕ ಪುಣ್ಯಕ್ಷೇತ್ರ ಗಳಲ್ಲಿ ಹರಿದ್ವಾರ, ವಾರಣಾಸಿಗಳು ಬಹಳ ಮುಖ್ಯವಾದುವು. ಈ ಎರಡು ಕ್ಷೇತ್ರಗಳೂ ಅತ್ಯಂತ ಪುರಾತನವಾದುವು. ಯುಗ ಯುಗ ಗಳಿಂದ ಭಕ್ತರನ್ನು ಆಕರ್ಷಿಸುವಂಥವು.






ಗಂಗಾತೀರದಲ್ಲಿ ಬೆಳಗುವ ಮತ್ತೊಂದು ಮುಖ್ಯ ನಗರವು ಕಲಕತ್ತಾ. ಈ ನಗರ ಪ್ರಾಂತ್ಯದಲ್ಲಿ ಈ ನದಿಯನ್ನು ಹುಗ್ಲೀನದಿ ಎನ್ನುತ್ತಾರೆ. ಕಲಕತ್ತ ದಿಂದ ಈ ನದಿ ಹಲವು ಭಾಗಗಳಾಗಿ ಸೀಳಿ, ಬಂಗಾಲದ ಹುಲಿಗಳಿಗೆ ನಿಲಯವಾದ ಸುಂದರ್ ಬಾನ್ಸ್ ಎಂಬ . ಕಾಡುಗಳ ಮೂಲಕ ಪ್ರವಹಿಸಿ ಸಮುದ್ರದಲ್ಲಿ ಕಲೆಯುತ್ತದೆ.



# ನಿಜವಾದ ವೈದ್ಯ

ಒಂದು ಕಾಲದಲ್ಲಿ ಭೀಮೇಶ್ವರನೆಂಬ ಒಬ್ಬ ರಾಜನಿದ್ದನು. ಅವನಿಗೆ ಯಾವುದೋ ಒಂದು ವಿಚಿತ್ರವಾದ ವ್ಯಾಧಿ ತಗಲಿತು. ಅದರ ಫಲಿತವಾಗಿ ಅವನ ಶರೀರದ ತುಂಬಾ ಕಪ್ಪು ಮಚ್ಚೆಗಳು ಎದ್ದು ವಿಕಾರವಾಯಿತು.

ರಾಜನ ಶರೀರವು ನೋಡುವವರಿಗೆ ಅಸಹ್ಯವಾಗಿ ಕಾಣುವಂತಾಯಿತು. ಆಸ್ಥಾನದ ವೈದ್ಯರು ತಮ್ಮ ರಾಜನಿಗೆ ಏನೇನೋ ಚಿಕಿತ್ಸೆಮಾಡಿ ನೋಡಿದರು. ಯಾವ ಫಲಿತವೂ ಸಿಗಲಿಲ್ಲ.

ರಾಜಧಾನೀ ನಗರದಲ್ಲಿರುವ ವೀರಯ್ಯನೆಂಬ ವೈದ್ಯನಿಗೆ ಈ ಸಮಾಚಾರ ಗೊತ್ತಾಯಿತು. ರಾಜನಿಗೆ ಬಂದಿರುವ ರೋಗವು ಬಹಳ ಅಪರೂಪವಾದುದೆಂದು ಅವನು ಅಂದುಕೊಂಡನು. ವೀರಯ್ಯನ ಕುಟುಂಬದವರು ವಂಶಪರಂಪರೆಯಾಗಿಯೇ ವೈದ್ಯವೃತ್ತಿ ಮಾಡಿಕೊಂಡಿರುವವರು. ಇಂತಹ ಅಪೂರ್ವ ವ್ಯಾಧಿಗೆ ವೀರಯ್ಯನ ತಂದೆ ಚಿಕಿತ್ಸೆ ಮಾಡಿದ್ದನೆಂದು ವೀರಯ್ಯನಿಗೆ ನೆನಪಾಯಿತು. ಆ ಚಿಕಿತ್ಸೆ ವೀರಯ್ಯನಿಗೂ ಗೊತ್ತಿತ್ತು.

ಆದುದರಿಂದ ವೀರಯ್ಯನು ಆ ವ್ಯಾಧಿಯ ಚಿಕಿತ್ಸೆಗೆ ಅಗತ್ಯವಿರುವ ಔಷಧವನ್ನು ತಯಾರು ಮಾಡಿ ಒಳ್ಳೆಯ ನಂಬುಗೆಯಿಂದ ಒಂದು ದಿನ ರಾಜನ ದರ್ಶನಕ್ಕಾಗಿ ಹೋದನು.

ಅವನು ಯಾರೆಂದು ತಿಳಿದು ಆಸ್ಥಾನ ವೈದ್ಯರು ಅವನಿಗೆ ಅನೇಕ ಪ್ರಶ್ನೆಗಳನ್ನು ಮಾಡಿ, ಉತ್ತರವನ್ನು ಕೇಳಿ, ಅವನು ವೈದ್ಯಶಾಸ್ತ್ರದಲ್ಲಿ ತುಂಬಾ ಪ್ರಾವೀಣ್ಯತೆ ಸಂಪಾದಿಸಿದ್ದಾನೆಂದು ತಿಳಿದುಕೊಂಡರು. ಅದನ್ನು ಸಹಿಸಲು ಅವರಿಂದಾಗಲಿಲ್ಲ.

ಅದರಿಂದ ಅವರಿಗೊಂದು ಭಯ ಹಿಡಿಯಿತು. ಒಂದು ವೇಳೆ ವೀರಯ್ಯನು ಕೊಟ್ಟ ಔಷಧಿಯಿಂದ ರಾಜನಿಗೆ ವ್ಯಾಧಿ ಗುಣವಾಗಿ ಬಿಟ್ಟರೆ, ರಾಜನ ದೃಷ್ಟಿಯಲ್ಲಿ ತಾವೆಲ್ಲರೂ ಅಸಮರ್ಥರಾದಂತೆಯೇ ಆಗುತ್ತದೆ. ಆಸ್ಥಾನದಲ್ಲಿ ತಮಗಿರುವ ಪದವಿಗೆ ಚ್ಯುತಿ ಬಂದರೂ ಬಂದೀತು ! ಈ ಪರಿಸ್ಥಿತಿಯನ್ನು ನೆನೆಯುವುದೇ ಕಷ್ಟವಾಯಿತು.

ಹೀಗೆ ಆಲೋಚಿಸಿ ಆಸ್ಥಾನ ವೈದ್ಯರು ವೀರಯ್ಯನೊಂದಿಗೆ, "ನಾವೆಲ್ಲಾ ಚಿಕ್ಕಂದಿನಿಂದಲೇ ಗುರುಕುಲದಲ್ಲಿ ಸೇರಿ ಕ್ರಮವಾಗಿ ವೈದ್ಯಶಾಸ್ತ್ರವನ್ನು ಅಭ್ಯಾಸಮಾಡಿದವರು. ಅಂತಹ ನಮ್ಮ ಚಿಕಿತ್ಸೆಗೇ ಬಗ್ಗದ ಮಹಾರಾಜರ ವ್ಯಾಧಿ ನಿನ್ನ ಚಿಕಿತ್ಸೆಗೆ ಬಗ್ಗಿ

ವಿ. ಸ್ವಾಮಿ



ಬಿಡುತ್ತದೆನ್ನುವುದು ಕೇವಲ ಭ್ರಮೆ. ಅದರ ಮೇಲೆ ನಿನ್ನ ಮದ್ದುಗಳು ಮಹಾರಾಜರ ವ್ಯಾಧಿಯನ್ನು ಗುಣಪಡಿಸುವುದಕ್ಕೆ ಬದಲು, ವಿಕಟಿಸುವ ಅಪಾಯವೂ ಇದೆ. ಹಾಗೇನಾದರೂ ಆದರೆ ಅದಕ್ಕೆ ನಾವು ಬಾಧ್ಯರಾಗ ಬೇಕಾಗಿ ಬರುತ್ತದೆ. ನಿನಗೂ ಕಷ್ಟಗಳು ಬರುತ್ತವೆ. ಆದುದರಿಂದ ನೀನು ರಾಜ ದರ್ಶನವೆಂದು ಇಲ್ಲಿಗೆ ಬರುವುದೇ ಬೇಡ. ನಮ್ಮನ್ನು ತೊಂದರೆಗೆ ಒಳಪಡಿಸದೆ ಹೋಗಿಬಿಡು" ಎಂದು ಹೇಳಿದರು.

ವೀರಯ್ಯನು ಮತ್ತೇನೂ ಮಾಡಲಾಗದೆ ತನ್ನ ಮನೆಗೆ ಹಿಂದಿರುಗಿದನು. ಆದರೂ ಆಸ್ಥಾನ ವೈದ್ಯರ ಮನಸ್ಸು ಬದಲಾಗುವುದೇನೋ ಎಂಬ ಆಸೆಯಿಂದ ನಾಲ್ಕೈದು ದಿನಗಳಿಗೊಂದು ಸಾರಿ ರಾಜಭವನದ ಕಡೆಗೆ ಹೋಗುತ್ತಲೇ ಇದ್ದನು. ವೈದ್ಯರು ಅವನನ್ನು ನೋಡಿ, ಬೈದು ಹಿಂದೆ ಕಳುಹಿಸುತ್ತಲೇ ಇದ್ದರು.

ಹೀಗೆ ಒಂದುಸಾರಿ ವೀರಯ್ಯನು ರಾಜಭವನದ ಕಡೆಯಿಂದ ಹಿಂದಿರುಗಿ ಬರುತ್ತಿದ್ದಾಗ, ಒಂದು ಧರ್ಮಛತ್ರದ ಜಗಲಿಯಲ್ಲಿ ಕುಳಿತಿದ್ದ ಒಬ್ಬ ರೋಗಿಯನ್ನು ನೋಡಿದನು. ಆ ರೋಗಿಯ ಶರೀರದಲ್ಲಿ ತುಂಬಾ ವಿಕಾರವಾದ ಕಪ್ಪು ಮಚ್ಚೆಗಳಿದ್ದುವು. ಅದು ರಾಜನಿಗೆ ಬಂದಂತಹ ಅಪೂರ್ವವಾದ ವ್ಯಾಧಿಯಂತಹುದೇ ಎಂದು ತೋರಿತು !

ವೀರಯ್ಯನು ಆ ರೋಗಿಯ ಬಳಿಗೆ ಹೋಗಿ ಪರೀಕ್ಷೆ ಮಾಡಿದನು. ಸಂದೇಹವೇನಿಲ್ಲ. ಅದೇ ವ್ಯಾಧಿ ಇದು. ಕೂಡಲೇ ವೀರಯ್ಯನು ಆ ಬಡ ರೋಗಿಗೆ ಚಿಕಿತ್ಸೆ ಪ್ರಾರಂಭಿಸಿದನು. ಒಂದು ತಿಂಗಳೊಳಗೆ ಅವನ ಶರೀರದ ಮಚ್ಚೆಗಳೆಲ್ಲಾ ಅಳಿಸಿ ಹೋದವು. ಅವನು ಆರೋಗ್ಯವಂತನಾದನು.

ಅನಂತರ ಒಂದು ದಿನ ರಾಜನು ಇಬ್ಬರು ಅಂಗರಕ್ಷಕರೊಂದಿಗೆ ಸಾಯಂಕಾಲದ ಹೊತ್ತಿನಲ್ಲಿ ಉದ್ಯಾನವನಕ್ಕೆ ಹೋಗುತ್ತ ಧರ್ಮಛತ್ರದ ಬದಿಯಿಂದಾಗಿ ನಡೆದನು. ಆಗ ಜಗಲಿಯಲ್ಲಿರುವ ರೋಗಿ ಜಗಲಿಯಿಂದಿಳಿದು ರಾಜನಿಗೆ ನಮಸ್ಕಾರಮಾಡಿದನು. ಹಾಗೆ ನಮಸ್ಕಾರ ಮಾಡಿದ ಆ ಹಳೆಯ ರೋಗಿಯನ್ನು ನೋಡಿ ರಾಜನು ಆಶ್ಚರ್ಯಪಟ್ಟು, ತನ್ನ ಅಂಗರಕ್ಷಕರೊಂದಿಗೆ "ಶರೀರದ ತುಂಬಾ ಮಚ್ಚೆಗಳಿರುವ ಇವನು ಜಗಲಿಯಲ್ಲಿ ಮುದುಡಿಕೊಂಡಿರುವುದನ್ನು ಅನೇಕ ಸಾರಿ ನೋಡಿದ್ದೇನೆ. ನನ್ನನ್ನು ನೋಡಿ ಬಹು ಕಷ್ಟದಿಂದ ಎದ್ದು ಕೈ ಮುಗಿಯುವವನು. ಈ ದಿನ ಆರೋಗ್ಯವಂತನಾಗಿ ಕಾಣುತ್ತಾನೆ. ಅವನನ್ನು ಇತ್ತ ಕರೆಯಿರಿ" ಎಂದನು.

ಅಂಗರಕ್ಷಕರು ಅವನನ್ನು ರಾಜನ ಬಳಿಗೆ ಕರೆದು ತಂದರು. ವಿಚಾರಿಸಿದಾಗ ಅವನು ತನಗೆ ಚಿಕಿತ್ಸೆ ಮಾಡಿದ ವೀರಯ್ಯನನ್ನು ಕುರಿತು ಎಲ್ಲಾ ವಿವರಗಳನ್ನೂ ಹೇಳಿದನು. ವೀರಯ್ಯನ ಮನೆ ಇರುವ ಪ್ರದೇಶವೂ ಅವನಿಂದ ತಿಳಿಯಿತು.

ರಾಜನು ಆ ದಿನ ರಾತ್ರಿ ಮಾರುವೇಷ ಹಾಕಿಕೊಂಡು ವೀರಯ್ಯನನ್ನು ನೋಡಲು ಹೋದನು. ವೀರಯ್ಯನು ಅವನನ್ನು ಪರೀಕ್ಷೆ ಮಾಡಿ, ತನ್ನ ಚಿಕಿತ್ಸೆಯನ್ನು ಪ್ರಾರಂಭ ಮಾಡಿದನು. ಆಮೇಲೆ ಇಪ್ಪತ್ತು ದಿನಗಳಲ್ಲಿ ರಾಜನ ಶರೀರದ ಮಚ್ಚೆಗಳೆಲ್ಲಾ ಹೋಗಿ, ವ್ಯಾಧಿ ಪೂರ್ತಿ ಗುಣವಾಯಿತು. ರಾಜನು ವೀರಯ್ಯನಿಗೆ ಕೃತಜ್ಞತೆಯನ್ನು ಹೇಳಿಕೊಂಡು, ಹೊರಡಲು ಸಿದ್ಧನಾದನು. ಆಗ ವೀರಯ್ಯನು ಅವನೊಂದಿಗೆ, "ಎಷ್ಟಾದರೂ ಈ ವ್ಯಾಧಿ ಅಪರೂಪವಾಗಿ ಬರುವಂಥಾದ್ದು. ದುರದೃಷ್ಟದಿಂದ ಲಕ್ಷದಲ್ಲಿ ಒಬ್ಬಿಬ್ಬರಿಗೆ ಬಂದೀತು. ಆದುದರಿಂದಲೇ ಇದರ ಚಿಕಿತ್ಸೆ ಎಲ್ಲಾ ವೈದ್ಯರಿಗೂ ತಿಳಿದಿರುವುದಿಲ್ಲ. ನನ್ನ ಕಣ್ಣಿಗೆ ಬಿದ್ದ ಒಬ್ಬಿಬ್ಬರಿಗೆ ನಾನೇನೋ ಚಿಕಿತ್ಸೆ ಮಾಡಿ ಗುಣಪಡಿಸಿದ್ದೇನೆ. ಆದರೆ ಈ ದೇಶವನ್ನು ಆಳುವ ಮಹಾರಾಜರಿಗೆ ಚಿಕಿತ್ಸೆ ಮಾಡುವ ದಾರಿ ಮಾತ್ರ ಕಾಣದಾಗಿದೆ. ಅದೇ ನನ್ನನ್ನು ಪೀಡಿಸುವ ದೊಡ್ಡ ಚಿಂತೆ" ಎಂದನು.

"ಅದಕ್ಕೇನು ಕಷ್ಟ? ಹೋಗಿ ರಾಜನ ದರ್ಶನ ಮಾಡಿ, ಚಿಕಿತ್ಸೆ ಮಾಡುತ್ತೇನೆಂದು ಹೇಳಿರಲ್ಲ!" ಎಂದನು ರಾಜ.

ಆಗ ವೀರಯ್ಯನು ತಾನು ಮಾಡಿದ ರಾಜ ದರ್ಶನದ ಪ್ರಯತ್ನಗಳಿಗೆ ರಾಜ ವೈದ್ಯರುಗಳಿಂದ ಹೇಗೆ ತಡೆ ಬಂದಿತೆಂಬುದನ್ನು ಹೇಳಿದನು. ಆಗ ರಾಜನಿಗೆ ಆಸ್ಥಾನ ವೈದ್ಯರ ಕಪಟಬುದ್ಧಿ ಗೊತ್ತಾಗಿಹೋಯಿತು. ಅವರಿಗೆ ತನ್ನ ಆರೋಗ್ಯಕ್ಕಿಂತಲೂ ಪದವಿಗಳೇ ಮುಖ್ಯವೆಂದಾಯಿತು. ಅವರಿಂದ ಗುಣಪಡಿಸಲಾಗದ ರೋಗವನ್ನು ವೀರಯ್ಯನು ಗುಣಪಡಿಸಿದರೆ ಆಗ ವೀರಯ್ಯನೇ ಎಲ್ಲರಿಗಿಂತ ಹೆಚ್ಚಿನವನಾಗುತ್ತಾನೆ. ಅದನ್ನು ಸಹಿಸಲಾಗದೆ ಅವರು ವೀರಯ್ಯನಿಗೆ ಅಡ್ಡ ಹಾಕಿದ್ದಾರೆ!

ರಾಜನು ವೀರಯ್ಯನಿಗೆ ಆಸ್ಥಾನದ ಪ್ರಧಾನ ವೈದ್ಯ ಪದವಿ ಕೊಡಲು ಆಗಲೇ ನಿಶ್ಚಯಿಸಿ ಆತನೊಂದಿಗೆ, "ವೀರಯ್ಯಾ, ನಿನ್ನ ವಿಷಯ ನಾನಾಗಿ ತಿಳಿದು, ನಿನ್ನಿಂದ ರಹಸ್ಯವಾಗಿಯೇ ಚಿಕಿತ್ಸೆ ಪಡೆ



ಯಲು ಮಾರುವೇಷದಲ್ಲಿ ಬಂದ ಈ ದೇಶದ ರಾಜನೇ ಕಣಯ್ಯಾ !" ಎಂದು ತನ್ನ ವೇಷವನ್ನು ತೆಗೆದು ಹಾಕಿದನು. "ನಾಳೆ ಬೆಳಿಗ್ಗೆ ರಾಜೋದ್ಯೋಗಿಗಳು ನಿನ್ನ ಹತ್ತಿರ ಸಕಲ ರಾಜಲಾಂಛನಗಳೊಂದಿಗೆ ಬರುತ್ತಾರೆ. ಸನ್ಮಾನಿಸಿ ನನ್ನ ಸಭೆಗೆ ಕರೆದುಕೊಂಡು ಬರುತ್ತಾರೆ. ಸಭೆಯಲ್ಲಿ ಪ್ರಧಾನ ವೈದ್ಯ ಪದವಿ ನಿನಗೇ ಕೊಡಲಿದ್ದೇನೆ. ಅದಕ್ಕೆ ನೀನು ಸಂಪೂರ್ಣ ಅರ್ಹನಾಗಿರುವಿ. ಇನ್ನು ಮೇಲೆ ಹೀಗೆ ಮೂರು ಮೂಲೆಯಲ್ಲಿ ನೀನು ವಾಸಮಾಡಬೇಕಾಗಿಲ್ಲ" ಎಂದನು ರಾಜ.

ವೀರಯ್ಯನು ರಾಜನಿಗೆ ವಿನಯದಿಂದ ನಮಸ್ಕರಿಸಿ, "ಮಹಾರಾಜರೇ, ತಾವು ಕೊಡುವ ಪದವಿಯನ್ನು ಬೇಡವೆನ್ನುವುದಕ್ಕೆ ಕ್ಷಮಿಸಿರಿ. ನನಗೆ ಈ ಹಳೇ ಕಾಲದ ಮನೆಯಲ್ಲಿರುವುದೇ ತೃಪ್ತಿಯಾಗಿದೆ." ಎಂದನು.

ರಾಜನು ಆಶ್ಚರ್ಯದಿಂದ, "ಏಕೆ ? ನಾನು ಕೊಡುವ ಪದವಿ ಸಂಪತ್ತುಗಳಿಂದ ತೃಪ್ತಿಯಾಗುವುದಿಲ್ಲವೆ ?" ಎಂದನು.

"ಇಲ್ಲ ಮಹಾರಾಜರೇ, ಒಂದುಸಾರಿ ನಾನು ಆಸ್ಥಾನದಲ್ಲಿ ಕುಳಿತು ಬಿಟ್ಟರೆ, ತಮಗೂ ರಾಜ ಕುಟುಂಬದವರಿಗೂ ಹೊರತು ಇತರರಿಗೆ ವೈದ್ಯ ಚಿಕಿತ್ಸೆ ನಡೆಸಲು ಅವಕಾಶವಾಗದು. ರೋಗಗ್ರಸ್ತರಾಗುವ ಸಾಮಾನ್ಯ ಜನರ ಸೇವೆಯಲ್ಲಿರುವ ಸುಖ ಅದರಲ್ಲಿ ನನಗಿಲ್ಲ. ಪದವಿ ಧನ ವ್ಯಾಮೋಹಗಳಿಗೆ ದಾಸನಾಗಿ ನನ್ನ ವೈದ್ಯಕೀಯವನ್ನು ಕೆಲವರಿಗೆ ಮಾತ್ರವೇ ಪರಿಮಿತಗೊಳಿಸಲಾರೆನು" ಎಂದನು ವೀರಯ್ಯ.

ವೀರಯ್ಯನ ಮಾತಿನಲ್ಲಿ ರಾಜನಿಗೆ ಒಳ್ಳೆಯ ಸತ್ಯವು ಕಂಡಿತು. ಅವನು ಸ್ವಲ್ಪ ಹೊತ್ತು ಆಲೋಚಿಸಿ, "ವೀರಯ್ಯಾ, ನಿಜವಾದ ವೈದ್ಯನು ನೀನೇ ! ಇಂತಹ ನೀನು ನನ್ನ ಪೌರನಾಗಿರುವುದಕ್ಕೆ ಹೆಮ್ಮೆಪಡುತ್ತೇನೆ. ನೀನು ಬಹು ಚೆನ್ನಾಗಿ ಸಾಮಾನ್ಯರಿಗೆ ವೈದ್ಯಕೀಯ ನಡೆಸುವ ಹಾಗೆ ಪ್ರತಿ ತಿಂಗಳೂ ಕೋಶಾಗಾರದಿಂದ ನಿರ್ದಿಷ್ಟ ಮೊತ್ತವನ್ನು ನಿನಗೆ ಕಳುಹಿಸುತ್ತೇನೆ. ನೀನು ಅಗತ್ಯವಿರುವಲ್ಲಿ ವೈದ್ಯಶಾಲೆ ನಿರ್ಮಿಸಿಕೊಂಡು ತರಭೇದವೇನಿಲ್ಲದೆ ಸಾರ್ವಜನಿಕ ರೋಗಿಗಳಿಗೆ ಸಹಾಯಕನಾಗಿರು. ಇಷ್ಟತಾನೇ ?" ಎಂದನು.

"ಇದಕ್ಕಿಂತ ಹೆಚ್ಚು ನನಗೇನು ಬೇಕು ? ಮನಸ್ಸಿದ್ದರೂ ಅಷ್ಟೊಂದು ಆರ್ಥಿಕಶಕ್ತಿ ನನಗಿದ್ದಿಲ್ಲ. ಅದೀಗ ನಿವೃತ್ತಿಯಾಯಿತು. ನಿಮ್ಮ ಸಹಾಯಕ್ಕೆ ಬಹಳ ಕೃತಜ್ಞನಾಗಿದ್ದೇನೆ" ಎಂದನು ವೀರಯ್ಯ.

ರಾಜನು ಸಂತೋಷದಿಂದ ತನ್ನ ಭವನಕ್ಕೆ ಹಿಂದಿರುಗಿದನು.





# ಧರ್ಮದೇವತೆ

ಹಿಂದೆ ಒಂದು ಕಾಲದಲ್ಲಿ ಕುಂಡಲಿನೀ ದೇಶವನ್ನು ಸತ್ಯಾನಂದನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನು ಬಹುದೊಡ್ಡ ಧರ್ಮನಿಷ್ಠನಾದವನು. ಧರ್ಮಕ್ಕಾಗಿ ಪ್ರಾಣವನ್ನಾದರೂ ಪಣವೊಡ್ಡ ಬಲ್ಲವನು. ಧರ್ಮಾಚರಣೆಯಲ್ಲಿ ಆಶ್ರಿತಪಕ್ಷಪಾತವೋ, ಬಂಧುಪ್ರೀತಿಯೋ ಅವನ ಮುಂದೆ ನಿಲ್ಲಲಾರವು. ಅವನ ಕುಲದೇವತೆಯೇ ಧರ್ಮದೇವತೆ. ದಿನಾ ಧರ್ಮದೇವತೆಯನ್ನು ಅರ್ಚನೆ ಮಾಡದೆ ನೀರು ಸಹಾ ಕುಡಿಯನು. ಅಂತಲೇ ಧರ್ಮದೇವತೆಯೂ ಅವನಿಗೆ ಒಲಿದಿದ್ದಳು.

ತ್ಯಾಗವೇ ಮೂರ್ತಿವಂತನಾದ ಸತ್ಯಾನಂದನಿಗೆ ಶ್ರವಣಾನಂದನೆಂಬ ಒಬ್ಬ ಮಗನಿದ್ದನು. ತನ್ನಲ್ಲಿ ವೃದ್ಧಾಪ್ಯದ ಅಶಕ್ತಿಗಳು ತಲೆಯೆತ್ತುವುದನ್ನು ನೋಡಿ ಸತ್ಯಾನಂದನು ಮಗನಿಗೆ ಪಟ್ಟಾಭಿಷೇಕ ಮಾಡಬೇಕೆಂದು ಅಂದುಕೊಂಡನು.

ಅದರಂತೆ ಮಂತ್ರಿಗಳೊಂದಿಗೂ ಪ್ರಜಾಪ್ರಮುಖರೊಂದಿಗೂ ಆಲೋಚನೆ ಮಾಡಿದ ಮೇಲೆ, ನಿರಭ್ಯಂತರವಾಗಿ ಶ್ರವಣಾನಂದನಿಗೆ ಪಟ್ಟಾಭಿಷೇಕವಾಯಿತು.

ಮುಂದೆ ಕೆಲವು ತಿಂಗಳ ಮೇಲೆ ಸತ್ಯಾನಂದನ ಆರೋಗ್ಯವು ತೀರಾ ಕೆಟ್ಟಿತು. ಅಂತಹ ಸ್ಥಿತಿಯಲ್ಲಿ ಅವನು ಮಗನನ್ನು ಹತ್ತಿರ ಕರೆದು, "ಅಪ್ಪಾ, ನಾನು ಹೇಳುವುದನ್ನು ಲಕ್ಷ್ಯಗೊಟ್ಟು ಕೇಳು. ಧರ್ಮಕ್ಕಾಗಿ ಪ್ರಾಣವನ್ನು ಕೊಡುವಷ್ಟರಮಟ್ಟಿನ ಧರ್ಮನಿಷ್ಠರು ನಮ್ಮ ಪೂರ್ವಜರು. ನಾನೂ ಹಾಗೆಯೇ ನಡೆದಿದ್ದೇನೆ. ನೀನು ಕೂಡಾ ಹಿರಿಯರು ನಡೆದ ದಾರಿಯಲ್ಲೇ ನಡೆಯಬೇಕು. ಧರ್ಮಾಚರಣೆಯಲ್ಲಿ ನಿನಗೇನಾದರೂ ಸಂದೇಹ ಬಂದರೆ, ಕಠಿಣ ಸಮಸ್ಯೆ ಎದ್ದರೆ, ನಮ್ಮ ರಾಜ್ಯದ ದಕ್ಷಿಣ ದಿಕ್ಕಿನಲ್ಲಿರುವ ಆಲಯಕ್ಕೆ ಹೋಗಿ ಧರ್ಮದೇವತೆಯ ದರ್ಶನಮಾಡು.. ನಿನ್ನ ಸಂದೇಹವನ್ನೋ ಸಮಸ್ಯೆಯನ್ನೋ ಹೇಳಿಕೋ. ಸಂದೇಹ ತೀರುತ್ತದೆ, ಸಮಸ್ಯೆ ಪರಿಹಾರವಾಗುತ್ತದೆ" ಎಂದು ಹೇಳಿದನು.

ಆಮೇಲೆ ಸತ್ಯಾನಂದನು ಬಹಳ ದಿನ ಬದುಕಲಿಲ್ಲ. ತಂದೆಯ ಮರಣಾನಂತರ ಶ್ರವಣಾನಂದನು ತಂದೆಯ ಹಾಗೆಯೇ ನ್ಯಾಯಮಾರ್ಗದಲ್ಲಿ ರಾಜ್ಯ ಪಾಲನೆ ಮಾಡುತ್ತ ಧರ್ಮಮೂರ್ತಿ ಎಂಬ ಕೀರ್ತಿಗಳಿಸಿಕೊಂಡಿದ್ದನು. ತಂದೆಯ ಬೋಧನೆ

ಎಸ್. ನಾಗೇಶ್ವರರಾವ್



ಗಳನ್ನೂ ಹೆಚ್ಚಾಗಿ ನೆನೆದುಕೊಂಡಿದ್ದನು. ಹೀಗೆ ಕೆಲವು ವರ್ಷ ಕಳೆಯಲು, ಶ್ರವಣಾನಂದನಿಗೆ ಧರ್ಮಸಂಕಟದ ಸಮಸ್ಯೆಯೊಂದು ಇದಿರಾಯಿತು.

ಶ್ರವಣಾನಂದನ ಕುಮಾರಿಯಾದ ಮಾಲತಿ ಒಬ್ಬ ಚಿಕ್ಕ ಸಾಮಂತ ರಾಜಕುಮಾರನನ್ನು ಪ್ರೇಮಿಸ ತೊಡಗಿದಳು. ಶ್ರವಣಾನಂದನಿಗೆ ಮಗಳ ಕೋರಿಕೆಗೆ ಅಡ್ಡಿ ಹೇಳಲು ಸಾಧ್ಯವಾಗಲಿಲ್ಲ. ಹಾಗೆಂದು ವಂಶಾಚಾರದ ಕ್ರಮವನ್ನು ಉಲ್ಲಂಘಿಸಲಿಕ್ಕೂ ಇಷ್ಟವಿಲ್ಲ. ಆ ಪ್ರಕಾರ ಮಾಲತಿ ಮತ್ತೊಂದು ದೇಶದ ರಾಜಕುಮಾರನನ್ನೇ ಮದುವೆಯಾಗಬೇಕಾಗಿತ್ತು.

ಮಗಳ ಇಷ್ಟದಂತೆ ಮದುವೆಯಾಗಲು ಬಿಟ್ಟರೆ ವಂಶಾಚಾರವನ್ನು ಮೀರುವ ಅಧರ್ಮವಾಗುತ್ತದೆ. ವಂಶಾಚಾರವನ್ನು ಉಳಿಸಲು ಹೋದರೆ ಮಗಳ ಮನಸ್ಸಿಗೆ ನೋವಾಗುತ್ತದೆ. ಏನು ಮಾಡುವುದೆಂದು ಅವನಿಗೆ ತಿಳಿಯಲಿಲ್ಲ.

ಈ ಧರ್ಮಸಂದಿಗ್ಧತೆಗೆ ಏನು ಮಾಡಬೇಕೆಂದು ಆಲೋಚಿಸುತ್ತಿರುವ ಶ್ರವಣಾನಂದನಿಗೆ ತಂದೆಯ ಮಾತು ನೆನಪಿಗೆ ಬಂದಿತು. "ಹೌದು. ಇದು ಧರ್ಮದೇವತೆಯ ಮುಂದೆ ನಿವೇದಿಸಬೇಕಾದ ಜಟಿಲ ಸಮಸ್ಯೆಯೇ ನಿಜ" ಎಂದುಕೊಂಡು ಅವನು ಕೂಡಲೇ ಧರ್ಮದೇವತೆಯ ಆಲಯಕ್ಕೆ ಹೋಗಿ ದೇವಿಯ ವಿಗ್ರಹಕ್ಕೆ ನಮಸ್ಕರಿಸಿ ಕೈಜೋಡಿಸಿಕೊಂಡು ತನ್ನ ಸಮಸ್ಯೆಯನ್ನು ಹೇಳಿಕೊಂಡನು.

ನೋಡುತ್ತಿದ್ದ ಹಾಗೆ ಧರ್ಮದೇವತೆಯ ವಿಗ್ರಹವು ವಿಚಿತ್ರ ಕಾಂತಿಯಿಂದ ಬೆಳಗತೊಡಗಿತು. ವಿಗ್ರಹದೊಳಗಿನಿಂದ "ಶ್ರವಣಾ, ನೀನು ರಾಜನಾಗುವುದಕ್ಕೆ ಮೊದಲು ತಂದೆಯಾದೆಯೋ, ರಾಜನಾದ ಮೇಲೆ ತಂದೆಯಾದೆಯೋ ?" ಎಂಬ ಪ್ರಶ್ನೆ ಹೊರಟಿತು.

"ತಾಯೇ ! ಪಟ್ಟಾಭಿಷೇಕದ ಕಾಲಕ್ಕೇ ನಾನು ವಿವಾಹಿತನಾಗಿದ್ದೆನು. ಆಗ ನನ್ನ ಮಗಳಾದ ಮಾಲತಿ ಹಸುಕಂದಳಾಗಿದ್ದಳು" ಎಂದನು ಶ್ರವಣಾನಂದ.

"ಹಾಗಿದ್ದರೆ ಮಾಲತಿಯ ವಿಷಯದಲ್ಲಿ ನೀನು ರಾಜಧರ್ಮವನ್ನು ಒತ್ತಬೇಕಾಗಿಲ್ಲ. ತಂದೆಯ ಧರ್ಮವನ್ನು ನಿರ್ವಹಿಸುವುದೇ ನಿನ್ನ ಬಾಧ್ಯತೆ. ಹೋಗು. ಸಂತೋಷವಾಗಿರು" ಎಂದಳು ಧರ್ಮದೇವತೆ.

ಕೂಡಲೆ ವಿಗ್ರಹದ ಕಾಂತಿ ಮಾಯವಾಗಿ ಎಂದಿನಂತಾಯಿತು. ಶ್ರವಣಾನಂದನು ವಿಗ್ರಹಕ್ಕೆ ಮತ್ತೆ ನಮಸ್ಕಾರಮಾಡಿ, ತನ್ನ ಭವನಕ್ಕೆ ಹಿಂದಿರುಗಿದನು.

ಆ ಮೇಲೆ ಒಂದು ಶುಭ ಮುಹೂರ್ತದಲ್ಲಿ ಅವಳು ಪ್ರೇಮಿಸಿದ ಸಾಮಂತ ರಾಜಕುಮಾರನೊಂದಿಗೇ ಅವಳ ವಿವಾಹವನ್ನು ನೆರವೇರಿಸಿದನು.

ಇದಾದ ಕೆಲವು ದಿನಗಳ ಮೇಲೆ ಶ್ರವಣಾನಂದನಿಗೆ ಮತ್ತೊಂದು ಸಮಸ್ಯೆ ಇದಿರಾಯಿತು. ಗುರುಕುಲದಲ್ಲಿ ಕ್ಷಾತ್ರ ವಿದ್ಯೆಗಳನ್ನು ಅಭ್ಯಾಸ

ಮಾಡುತ್ತಿದ್ದ ಅವನ ಕುಮಾರ ನಾಗಾನಂದನಿಂದಲೇ ಆ ದಾರುಣವಾದ ಸಮಸ್ಯೆ ಬಂತು.

ನಾಗಾನಂದನು ಮತ್ತೊಬ್ಬ ಸಹಾಧ್ಯಾಯಿಯೊಂದಿಗೆ ಖಡ್ಗವಿದ್ಯೆಯ ಸಾಧನೆ ಮಾಡುತ್ತಿದ್ದಾಗ ಏನೋ ತಪ್ಪಿನಿಂದಾಗಿ ರಾಜಕುಮಾರನ ಖಡ್ಗದಿಂದ ಆ ಸಹಾಧ್ಯಾಯಿಯ ಬಲಗೈ ತುಂಡಾಗಿಹೋಯಿತು. ಅವನು ವಿರಾಗನೆಂಬ ಬ್ರಾಹ್ಮಣನ ಮಗ.

ವಿರಾಗನು ತುಂಬಿದ ಸಭೆಯಲ್ಲಿ ರಾಜಾ ಶ್ರವಣಾನಂದನನ್ನು ನೋಡಿ, "ಮಹಾರಾಜಾ, ಖಡ್ಗವಿದ್ಯೆಯಲ್ಲಿ ತನ್ನನ್ನು ಮೀರಿಸುವನೆಂಬ ಅಸೂಯೆಯಿಂದ ನಿಮ್ಮ ಕುಮಾರ ನಾಗಾನಂದನು ನನ್ನ ಕುಮಾರನ ಬಲಗೈಯನ್ನು ಖಂಡಿಸಿದನು. ಪೆಟ್ಟಿಗೆ ಪ್ರತಿ ಪೆಟ್ಟೇ ಪ್ರತೀಕಾರವೆಂದು ನಮ್ಮ ಶಿಕ್ಷಾಸ್ಮೃತಿ ಹೇಳುತ್ತದಷ್ಟೆ? ಆ ಪ್ರಕಾರ ನಿಮ್ಮ ಕುಮಾರನ ಬಲದ ಕೈಯನ್ನು ಖಂಡಿಸಿ, ಧರ್ಮಮೂರ್ತಿಗಳೆಂಬ ನಿಮ್ಮ ಕೀರ್ತಿಯನ್ನು ಸಾರ್ಥಕ ಮಾಡಿಕೊಳ್ಳಬೇಕು" ಎಂದನು.

ಶ್ರವಣಾನಂದನಿಗೆ ಏನು ಮಾಡಬೇಕೆಂದು ಗೊತ್ತಾಗಲಿಲ್ಲ. ಆಗಲೇ ಅವನು ಸಭೆಯನ್ನು ಮುಗಿಸಿ ಧರ್ಮದೇವತೆಯ ಆಲಯಕ್ಕೆ ಹೋಗಿ ಧರ್ಮದೇವತೆಯ ಮುಂದೆ ತನ್ನ ಸಮಸ್ಯೆಯನ್ನು ವಿವರಿಸಿದನು.

ಆಗ ಆಲಯವೆಲ್ಲವೂ ದಿವ್ಯಕಾಂತಿಯಿಂದ ತುಂಬಿಹೋಯಿತು. ಧರ್ಮದೇವತೆ ಗಂಭೀರವಾದ ಕಂಠದಿಂದ, "ಶ್ರವಣಾ, ಪೆಟ್ಟಿಗೆ ಪ್ರತಿ ಪೆಟ್ಟೇ ಪ್ರತೀಕಾರ ಎಂಬ ನಿಮ್ಮ ಶಿಕ್ಷಾಸ್ಮೃತಿಗೆ ಕಳಂಕ ಬರಬಾರದು. ನಿನ್ನ ಮಗನು ಯಾವ ಕೈಯಿಂದ ಬ್ರಾಹ್ಮಣ ಕುಮಾರನ ಕೈಯನ್ನು ಕಡಿದನೋ, ಆ ಕುಮಾರನು ಕೂಡಾ ಅದೇ ಕೈಯಿಂದ ನಿನ್ನ ಕುಮಾರನ ಬಲಗೈಯನ್ನು ಕಡಿಯಬೇಕು. ಅದೇ ಧರ್ಮ!" ಎಂದಳು.

ಮರುದಿನ ಶ್ರವಣಾನಂದನು ವಿರಾಗನೊಂದಿಗೆ ಧರ್ಮದೇವತೆ ಹೇಳಿದ ಮಾತುಗಳನ್ನು ಹೇಳಿ, "ನಿನ್ನ ಕುಮಾರನು ಬಲಗೈಯನ್ನು ಉಪಯೋಗಿಸಲು ಸಾಧ್ಯವಿಲ್ಲದುದರಿಂದ ಶಿಕ್ಷಾಸ್ಮೃತಿಯ







ಪ್ರಕಾರ ಶಿಕ್ಷೆ ನಡೆಸಲು ಸಾಧ್ಯವಾಗದು. ಅದು ಬೇಕೆಂದು ಮಾಡಿದ ತಪ್ಪು ಅಲ್ಲದುದರಿಂದಲೇ ಹೀಗಾಯಿತು" ಎಂದನು.

ಸಭೆಯಲ್ಲಿದ್ದವರೆಲ್ಲಾ ಸಂತೋಷದಿಂದ ಕರತಾಳ ಧ್ವನಿ ಮಾಡಿದರು. ವಿರಾಗನು ಮಾತಾಡದೆ ಸುಮ್ಮನಾದನು. ಆದರೆ ಶ್ರವಣಾನಂದನು ಹೇರಳವಾದ ಧನವನ್ನೂ, ಮಾನ್ಯವನ್ನೂ ಕೊಟ್ಟು ಅವನನ್ನೂ, ಅವನ ಮಗನನ್ನೂ ಸಮಾಧಾನಪಡಿಸಿದನು.

ವೈಶಾಲಿ ಎಂಬುದು ಕುಂಡಲಿನಿಯ ನೆರೆಯ ರಾಜ್ಯ. ಅಲ್ಲಿಯ ರಾಜ ವಸಂತಸೇನನು ಶ್ರವಣಾನಂದನ ಬಾಲ್ಯಮಿತ್ರ. ಅವನು ಒಮ್ಮೆ ಶ್ರವಣಾನಂದನನ್ನು ನೋಡಲು ಬಂದನು. ಒಂದು ದಿನ ರಾತ್ರಿ ಭೋಜನವೆಲ್ಲ ಮುಗಿದ ಮೇಲೆ ವಸಂತಸೇನನು ಕಾಲಕ್ಷೇಪಕ್ಕಾಗಿ ಚದುರಂಗವಾಡಲು ಕುಳಿತನು. ಅತಿಥಿಯ ಕರೆಗೆ ಒಲ್ಲೆನೆಂದು ಹೇಳಲಾಗದೆ ಶ್ರವಣಾನಂದನೂ ಆಟಕ್ಕೆ ಕುಳಿತನು.

"ಆಟದಲ್ಲಿ ಪಂದ್ಯವಿಲ್ಲದಿದ್ದರೆ ರಂಗುಬಾರದು. ಏನಾದರೂ ಪಂದ್ಯ ಒಡ್ಡು!" ಎಂದನು ವಸಂತಸೇನ.

ಶ್ರವಣಾನಂದನು ತನ್ನ ಮುಂಗೈಯ ಕಂಕಣವನ್ನು ತೆಗೆದು ಪಣವಿಟ್ಟನು. ಅದನ್ನು ನೋಡಿ ವಸಂತಸೇನನು ನಕ್ಕು "ನಾವು ರಾಜರಾಗಿದ್ದು, ಇಂತಹ ಸಣ್ಣ ಸಣ್ಣ ಪಂಥವಿಟ್ಟರೆ ಸಾಮಾನ್ಯರಿಗೂ ನಮಗೂ ವ್ಯತ್ಯಾಸವೇನಿದೇ? ನಾನು ನನ್ನ ರಾಜ್ಯವನ್ನೇ ಪಣ ಒಡ್ಡುತ್ತೇನೆ. ನೀನೂ ಹಾಗೇ ಮಾಡು" ಎಂದು ಪ್ರೋತ್ಸಾಹಿಸಿದನು.

ಶ್ರವಣಾನಂದನು ಹಾಗೆಯೇ ಒಡ್ಡಿದ್ದೇನೆಂದನು. ಆಮೇಲೆ ಹಟಕ್ಕೆ ಬಿದ್ದು ಒಬ್ಬರನ್ನೊಬ್ಬರು ಸೋಲಿಸಲು ಬಹಳ ಹೆಣಗಾಡಿದರು. ಕಡೆಗೂ ದುರದೃಷ್ಟವಶದಿಂದ ಶ್ರವಣಾನಂದನು ಸೋತು ಹೋದನು. ಹೇಳಿದ ಮಾತಿನ ಪ್ರಕಾರ ಅವನು ತನ್ನ ರಾಜ್ಯವನ್ನು ವಸಂತಸೇನನಿಗೆ ಕೊಡಲು ಸಿದ್ಧನಾದನು.

ಅದಕ್ಕೆ ವಸಂತಸೇನನು ಅಂಗೀಕರಿಸಲಿಲ್ಲ. "ನಾನು ಆಟದಲ್ಲಿ ಹಟಬಂದು ರಂಗೇರಲಿಕ್ಕಾಗಿ ಹಾಗೆ ಹೇಳಿದೆನೇ ಹೊರತು ನಿನ್ನ ರಾಜ್ಯವು ನನಗೇಕೆ? ನಾವು ಎಂದಿಗೂ ಸ್ನೇಹಿತರೇ! ನಿನ್ನ ರಾಜ್ಯವನ್ನು ಆಟದಲ್ಲಿ ಸ್ವೀಕರಿಸಿ ಮಿತ್ರದ್ರೋಹ ಮಾಡಲಾರೆನಪ್ಪ" ಎಂದನು.

ಶ್ರವಣಾನಂದನು ಅವನ ಮಾತನ್ನು ಒಪ್ಪದೆ, "ನೀನು ಆಟಕ್ಕಾಗಿ ಹೇಳಿದರೂ ನಾನು ಮಾತ್ರ ನಿಜವಾಗಿಯೇ ನನ್ನ ರಾಜ್ಯವನ್ನು ಪಂದ್ಯ ಒಡ್ಡಿದೆ. ಹೇಳಿದ ಮಾತು ತಪ್ಪಲಾರೆ. ನನ್ನ ರಾಜ್ಯವು ಇನ್ನು ನಿನ್ನದೇ. ಸ್ವೀಕರಿಸು" ಎಂದು ವಸಂತಸೇನನನ್ನು ಬಲವಂತಪಡಿಸಿದನು.

ಆದರೂ ವಸಂತಸೇನನು ಒಪ್ಪಲೇ ಇಲ್ಲ. ಕಡೆಗೆ ಶ್ರವಣಾನಂದನು ಸಮಸ್ಯೆಯ ಪರಿಹಾರಕ್ಕಾಗಿ

ಧರ್ಮದೇವತೆಯನ್ನೇ ದರ್ಶನಮಾಡಲು ಹೊರಟನು. ಇಬ್ಬರೂ ಕೂಡಿಯೇ ಆ ದೇವಾಲಯಕ್ಕೆ ಹೋದರು. ಶ್ರವಣಾನಂದನು ತನ್ನ ಸಮಸ್ಯೆಯನ್ನು ಹೇಳಿ ಕೊಂಡು ಪರಿಷ್ಕಾರಮಾರ್ಗ ತೋರಿಸಬೇಕೆಂದು ದೇವತೆಯನ್ನು ಪ್ರಾರ್ಥಿಸಿದನು.

ಈ ಸಾರಿ ಧರ್ಮದೇವತೆಯ ವಿಗ್ರಹದಿಂದ ಯಾವ ಕಾಂತಿಯೂ ಹೊರಡಲಿಲ್ಲ. ಆದರೆ ವಿಗ್ರಹ ದೊಳಗಿನಿಂದ ದುಃಖಭಾವದ ಸ್ವರವು ಹೊರಟಿತು : "ಶ್ರವಣಾ, ರಾಜ್ಯವನ್ನು ಇನ್ನೊಬ್ಬರಿಗೆ ಕೊಡಲು ನೀನು ಯಾರು ? ತೆಗೆದುಕೊಳ್ಳಲಿಕ್ಕೆ ವಸಂತಸೇನನು ಯಾರು ? ರಾಜ್ಯವು ಪ್ರಜೆಗಳದು. ರಾಜನು ಕೇವಲ ಪರಿಪಾಲಕನು ಮಾತ್ರವೇ. ದೇವಾಲಯಕ್ಕೆ ಧರ್ಮ ಕರ್ತನಿರುವ ಹಾಗಿನವನೇ ನೀನು ಕೂಡಾ. ನನ್ನದೇ ರಾಜ್ಯವೆಂದು ತಿಳಿದುದರಿಂದ ನೀನು ಸರ್ವಾಧಿಕಾರಿ ಯಾದೆ, ಧರ್ಮಬಾಹಿರನಾದೆ !"

ಧರ್ಮದೇವತೆಯ ಮಾತು ಕೇಳಿ ವಸಂತಸೇನನು ದೇವಿಗೆ ನಮಸ್ಕಾರಮಾಡಿ ಹೊರಟುಹೋದನು. ಶ್ರವಣಾನಂದನೂ ಹೊರಡಲಿರುವಾಗ ಧರ್ಮ ದೇವತೆಯ ವಿಗ್ರಹದಿಂದ, "ಶ್ರವಣಾ ! ರಾಜ್ಯವನ್ನು ಪಣ ಒಡ್ಡುವ ಮೊದಲು ನೀನು ಪ್ರಜೆಗಳನ್ನು ಕುರಿತು ಯೋಚಿಸಲೇ ಇಲ್ಲ. ಜೂಜುಗಾರನಾದ ನೀನು ಧರ್ಮವನ್ನು ಅತಿಕ್ರಮಿಸಿರುವೆ. ನೀನು ರಾಜನಾಗಿರಲು ಯೋಗ್ಯನಲ್ಲ. ನಿನ್ನ ರಾಜ್ಯದಲ್ಲಿ ನಾನೂ ಇರಲಾರೆನು" ಎಂದಳು. ಮರುಕ್ಷಣದಲ್ಲಿ ವಿಗ್ರಹದ ತಲೆ ಕೆಳಗೆ ಬಿತ್ತು.

ಶ್ರವಣಾನಂದನು ದುಃಖಿದ ಬೆಟ್ಟವನ್ನೇ ಹೊತ್ತವನ ಹಾಗೆ ತಲೆ ತಗ್ಗಿಸಿಕೊಂಡು ಅರಮನೆಗೆ ಹಿಂದಿರುಗಿದನು.

ಆಮೇಲೆ ಒಂದು ಶುಭ ಮುಹೂರ್ತದಲ್ಲಿ ಮಗ ನಾಗಾನಂದನಿಗೆ ಪಟ್ಟಾಭಿಷೇಕ ಮಾಡಿ, "ಮಗನೇ, ಈ ರಾಜ್ಯವು ಪ್ರಜೆಗಳದು, ನಿನ್ನದಲ್ಲ. ನೀನು ಕೇವಲ ಪರಿಪಾಲಕನು ಮಾತ್ರವೇ. ಈ ಮಾತನ್ನು ಎಂದಿಗೂ ಮರೆಯಬೇಡ. ಧರ್ಮದೇವತೆಯನ್ನು ನಿನ್ನ ಹೃದಯೊಳಗೇ ಪ್ರತಿಷ್ಠೆ ಮಾಡಿಕೋ" ಎಂದು ಬೋಧಿಸಿದನು.

ಮರುದಿನ ಬೆಳಗ್ಗೆ ಶ್ರವಣಾನಂದನು ಧರ್ಮ ದೇವತೆಯ ಆಲಯದಲ್ಲೇ ತಪಸ್ಸಿಗೆ ಕುಳಿತು ಕೊಳ್ಳುವ ನಿರ್ಧಾರದಿಂದ ಹೋದನು.

ಆಗ ಧರ್ಮದೇವತೆಯ ವಿಗ್ರಹದ ತಲೆ ಯಥಾ ಸ್ಥಾನದಲ್ಲಿದ್ದಿತು. ವಿಗ್ರಹವು ಕೂಡಾ ದಿವ್ಯಕಾಂತಿ ಯಿಂದ ಬೆಳಗುತ್ತಿದ್ದಿತು. ಇದನ್ನು ನೋಡಿ ಶ್ರವಣಾನಂದನ ಚಿಂತೆ ಪೂರ್ತಿ ಪರಿಹಾರವಾಯಿತು. ಅವನಿಗಾದ ಆನಂದಕ್ಕೆ ಮೇರೆಯೇ ಇರಲಿಲ್ಲ. ವಿಗ್ರಹದ ಮುಂದೆ ಸಾಷ್ಟಾಂಗ ಪ್ರಣಾಮ ಮಾಡಿದನು.






ಕನಕಾಂಗಿ ಎಂಬ ಹುಡುಗಿಯೊಂದಿಗೆ ರಂಗರಾಜ ಎಂಬವನಿಗೆ ಮದುವೆಯಾಯಿತು. ಕನಕಾಂಗಿ ತನ್ನ ತಂದೆ ತಾಯಿಯರ ಬುದ್ಧಿ ಮಾತುಗಳನ್ನು ಕೇಳಿ ಕೊಂಡು ಗಂಡನ ಜೊತೆಯಲ್ಲಿ ಅತ್ತೆಯ ಮನೆಗೆ ಬಂದುದೂ ಆಯಿತು.

ಬಂದ ಕೂಡಲೇ ಮಾವಯ್ಯ ವೆಂಕಟಾಚಲಪತಿ ಸೊಸೆಯೊಂದಿಗೆ ಮೆಲ್ಲನೆಯಿಂದ, "ನೋಡು ಕನಕಾಂಗೀ, ನಿನ್ನ ಅತ್ತೆಗೆ ಸ್ವಲ್ಪ ಕೋಪದ ಗುಣ. ನಿನ್ನ ಮೇಲೆ ದುರುಸುತನ ತೋರಿಸುತ್ತಾಳೆ. ಏನೇನೋ ಹೇಳಿ ಬೈಯುತ್ತಾ ಇದ್ದಾಳು. ತಾಳಿ ಕೊಂಡು ಅವಳು ಹೇಳಿದ ಹಾಗೆ ನಡೆದುಕೋ. ಅದನ್ನೆಲ್ಲ ಮನಸ್ಸಿಗೆ ಹಚ್ಚಿಕೊಂಡು ನೊಂದುಕೊಳ್ಳ ಬೇಡ" ಎಂದು ಹೇಳಿಟ್ಟನು.

ಕನಕಾಂಗಿ ಮೌನವಾಗಿ ತಲೆತಗ್ಗಿಸಿ ಕೇಳಿ ಸುಮ್ಮನೆ ಗೋಣಾಡಿಸಿದಳು.

ಕನಕಾಂಗಿ ಎಷ್ಟು ಸಹನೆಯಿಂದ ಉದಾಸೀನ ವೇನಿಲ್ಲದೆ ಮನೆಗೆಲಸ ಮಾಡುತ್ತಿದ್ದರೂ, ಅತ್ತೆ ಪಾರಮ್ಮ ಮತ್ತೆ ಮತ್ತೆ ಕೆಲಸ ಹೇಳುತ್ತಾ ಇರುವಳು. ಕನಕಾಂಗಿ ಮನೆಗೆ ಬಂದ ಮೂರನೇ ದಿನದಲ್ಲಿ ಅವಳು ಬಾವಿಯಿಂದ ನೀರು ಸೇದಿಕೊಂಡು ಬರುವಾಗ, ಅವಳು ಎಷ್ಟು ಮೆಲ್ಲ ನಡೆಯುತ್ತಾ ಳೆಂದು ಅತ್ತೆ ವರ್ಣಿಸಿ ವರ್ಣಿಸಿ, ನಾಲಗೆಗೆ ತೆರಪಿಲ್ಲ ದಂತೆ ನಿಂದಿಸಿದಳು.

ಹಾಗೆ ಅತ್ತೆ ಬಾಗಿಲಲ್ಲಿ ನಿಂತು, "ಆಹಾಹಾ! ಬಹಳ ಚೆಂದಾಗಿದೆ! ಹೀಗೆ ಮದುಮಗಳ ಹಾಗೆ ನಡೆದರೆ ಹೇಗೆ? ಅಷ್ಟು ಬಟ್ಟೆಗಳನ್ನೆಲ್ಲ ಒಗೆದು ಯಾವಾಗ ಒಣಗ ಹಾಕ್ತಿ? ಯೋಚನೆ ಇದೆಯಾ ನಿನಗೆ?" ಎಂದು ಗಟ್ಟಿಯಾಗಿ ಕಿರಿಚಿದಳು.

ಹೆದರಿ ನಡುಗುವ ಕನಕಾಂಗಿಯ ಸೊಂಟದಿಂದ ಬಿಂದಿಗೆ ಜಾರಿ ಕೆಳಗೆ ಬಿತ್ತು. ನೀರೆಲ್ಲಾ ಚೆಲ್ಲಿ ಬಿಂದಿಗೆ ಜಜ್ಜಿತು.

"ಅಯ್ಯಯ್ಯೊ! ಹೊಸಾ ಬಿಂದಿಗೇನ ಜಜ್ಜಿ ಹಾಕಿದಿಯಲ್ಲೇ! ದರಿದ್ರ ಶನಿಯೇ!" ಎಂದು ಕೂಗಿದಳು ಪಾರಮ್ಮ.

ಕನಕಾಂಗಿ ಮಾತಾಡದೆ ನಡುಗುತ್ತಾ ನಿಂತಳು.

ಚಾವಡಿಯ ಕಿಟಿಕಿಯಿಂದ ಇದನ್ನು ನೋಡಿದ ಮಾವ ವೆಂಕಟಾಚಲಪತಿ ಈಚೆಗೆ ಬಂದು, ಪಾರಮ್ಮ ನನ್ನು ನೋಡಿ, "ಹುಡುಗಿ ತುಂಬಾ ಹೆದರಿದ್ದಾಳೆ.

ಆರ್. ಎಸ್. ನಾರಾಯಣ



ಇನ್ನೂ ಯಾಕೆ ಕಿರಿಚಾಡ್ತೀ? ಸ್ವಲ್ಪ ಬಾಯಿ ಮುಚ್ಚು" ಎಂದು ಸಮಾಧಾನ ಹೇಳಿದನು.

ಮಧ್ಯಾಹ್ನ ಊಟದ ಸಮಯದಲ್ಲಿ ತುಪ್ಪದ ಕಂಚು ಹಿಡಿದುಕೊಂಡು ಕನಕಾಂಗಿ ಬಡಿಸುತ್ತಿದ್ದಳು. "ತುಪ್ಪ ಬಡಿಸುವಾಗ ಚಮಚ ಹೇಗೆ ಹಿಡಿಯಬೇಕೆಂದು ಅರೆದರೆದು ಹೇಳಿದ್ದೆ. ಇನ್ನೂ ಗೊತ್ತಿಲ್ಲವೆಂದರೇನು? ನಿನ್ನ ಬುದ್ಧಿಗೆ ಮಣ್ಣು ಮೆತ್ತಾ! ಎಂಥಾ ಪೆದ್ದು ಹೆಣ್ಣು ಬಂತಪ್ಪ ನಮ್ಮ ಮನೆಗೆ ಸೊಸೆಯಾಗಿ!" ಎಂದಳು ಪಾರಮ್ಮ.

ಹೆದರಿ ನಡುಗಿದ ಕನಕಾಂಗಿಯ ಕೈಯಿಂದ ತುಪ್ಪದ ಕಂಚು ಕೆಳಗೆ ಬೀಳುವಾಗ ಪಕ್ಕದಲ್ಲಿದ್ದವರು ಹಿಡಿದರೂ, ತುಪ್ಪವಷ್ಟೂ ಚೆಲ್ಲಿ ಹೋಯಿತು.

"ಅಯ್ಯಯ್ಯೊ! ಒಳ್ಳೇ ತುಪ್ಪ ನೆಲಕ್ಕೆ ಹಾಕಿ ಹಾಳುಮಾಡಿದಳಲ್ಲಪ್ಪಾ! ಹಾಳಾದವಳೇ!" ಎಂದು ಅತ್ತೆ ಕೂಗಿದಳು.

ಹೆದರಿ ನಡುಗುವ ಸೊಸೆಯನ್ನು ನೋಡಿ ವೆಂಕಟಾಚಲಪತಿ ಮತ್ತೆ ಪಾರಮ್ಮನನ್ನು ಸಮಾಧಾನ ಪಡಿಸಿದನು.

ಆ ದಿನ ಸಾಯಂಕಾಲ ಕನಕಾಂಗಿ ಬಾವಿಯಿಂದ ನೀರು ಸೇದುವಾಗ ಪಾರಮ್ಮ ದಡದಡನೆ ಅಲ್ಲಿಗೆ ಬಂದು, "ಏನೇ ನಿನ್ನ ಬುದ್ಧಿ. ಒಲೇ ಮೇಲೆ ಅನ್ನಕ್ಕಿಟ್ಟದ್ದು ನೆನಪಿದೆಯೇ? ಅನ್ನ ಬೆಂದು ಮಣ್ಣಯಾದರೆ ಯಾರು ತಿಂದಾರು? ನೀರಿಗೇನು ಅವಸರ? ಯಾವುದು ಮೊದಲು, ಯಾವುದು ಮತ್ತೆ ಎಂಬ ಜ್ಞಾನ ಸ್ವಲ್ಪವೂ ಇಲ್ಲ..." ಎಂದು ಮುಂತಾಗಿ ಬಯ್ಯತೊಡಗಿದಳು.

ಕನಕಾಂಗಿಯ ಕೈಕಾಲುಗಳು ನಡುತ್ತಿರಲು ಹಗ್ಗ ಸಮೇತ ಬಿಂದಿಗೆ ಬಾವಿಯೊಳಗೆ ಜಾರಿ ಹೋಯಿತು. ಕಡೆಗೆ ಕನಕಾಂಗಿಯ ಗಂಡ ರಂಗರಾಜನು ಎಲ್ಲಿಂದಲೋ ಪಾತಾಳ ಗರಡಿ ತಂದು ಅದನ್ನು ತೆಗೆದನು. ಮರುದಿನ ಬೆಳಗ್ಗೆ ಕನಕಾಂಗಿ ಎರಡು ಎಮ್ಮೆಗಳ ಹಾಲನ್ನು ಹಿಂಡಿ ಹಾಲಿನ ತಂಬಿಗೆಯನ್ನು ಎತ್ತಿಕೊಂಡು ಹಟ್ಟಿಯಿಂದ ಒಳಗೆ ತರುತ್ತಿದ್ದಳು.

ಆಗ ಪಾರಮ್ಮ ಅವಳ ಇದಿರಿಗೆ ಹೋಗಿ ಚುರುಚುರು ನೋಡುತ್ತ, "ಅಕ್ಕಚ್ಚು ಕುಡಿದು ಮುಗಿಯುವ ಮೊದಲೇ ಹಾಲು ಹಿಂಡಿಬಿಟ್ಟೆಯಾ? ಎಮ್ಮೆ ಸರಿಯಾಗಿ ಹಾಲು ಇಳಿಸಲಿಕ್ಕೇ ಇಲ್ಲ. ಏನು ಜೀವ ಎಳೀತು ನಿನಗೆ?" ಎಂದು ಬೈದಳು.

ಕನಕಾಂಗಿಯ ಕೈಯಿಂದ ಹಾಲು ತಂಬಿಗೆ ಜಾರಿ ಬಿದ್ದು ಹಾಲೆಲ್ಲ ನೆಲದ ಪಾಲಾಯಿತು.

ಬೀದಿಯಿಂದ ಮನೆಯೊಳಗೆ ಬರುತ್ತಿದ್ದ ವೆಂಕಟಾಚಲಪತಿ ಅದನ್ನು ನೋಡಿ, "ಏನಮ್ಮಾ ನೀನು? ನಿನ್ನೆ ನೀರ ಬಿಂದಿಗೆ ಜಜ್ಜಿದಿ. ಬಡಿಸುವಾಗ ತುಪ್ಪ ಚೆಲ್ಲಿದಿ. ಹಗ್ಗ ಬಾವಿಗೆ ಹಾಕಿದೆ. ಈಗ ಅಷ್ಟೂ ಹಾಲು ಹೋಯಿತು. ಹೀಗೆ ಹೆದರಿಕೆ ಪುಕ್ಕಿಯಾದರೆ ಹೇಗಮ್ಮಾ?" ಎಂದನು. ಕನಕಾಂಗಿ ಇನ್ನಷ್ಟು ಹೆದರುತ್ತ ಬಾಡಿದ ಮುಖದಿಂದ, "ನಾನೇನು

ಮಾಡಲಿ ಮಾವಯ್ಯಾ! ಯಾರಾದರೂ ಹೆದರಿಸಿ ಬಿಟ್ಟರೆ ನನ್ನ ಮೈಪೂರಾ ನಡುಗುತ್ತೆ" ಎಂದಳು ಮೆಲ್ಲನೆ ದೀನಳಾಗಿ ನೋಡುತ್ತ.

ವೆಂಕಟಾಚಲಪತಿ ಹೆಂಡತಿಯನ್ನು ನೋಡಿ, "ನೀನು ಇವಳನ್ನು ಬೈದಾಗಲೆಲ್ಲಾ ಏನೋ ಒಂದು ನಷ್ಟವೇ ಆಗುತ್ತೆ. ನೀನು ಸ್ವಲ್ಪ ಕೋಪ ಕಮ್ಮಿ ಮಾಡಿಕೋ ಎಂದರೆ ನಿನಗೆ ಸ್ವಲ್ಪವಾದರೂ ಅರ್ಥ ವಾಗುವುದಿಲ್ಲವೇಕೆ? ಇಷ್ಟು ಪ್ರಾಯವಾಗಿ ಏನು ಪ್ರಯೋಜನ?" ಎಂದನು.

ಪಾರಮ್ಮ ಕೋಪದಿಂದ ಮೂತಿ ತಿವಿದು ಅಲ್ಲಿಂದ ಆಚೆಗೆ ಹೋದಳು.

ಮರುದಿನ ನೆರೆಯವನೆಯ ಕಾವೇರಮ್ಮ ಬಂದು ಪಾರಮ್ಮನೊಂದಿಗೆ ಅದೂ ಇದೂ ಮಾತಾಡಿ ಕೊಂಡು ಕುಳಿತಳು. ಆಗ ಕಾವೇರಮ್ಮ ಸ್ವಲ್ಪ ನೀರು ಬೇಕೆಂದಳು. ಪಾರಮ್ಮ ಸೊಸೆಯನ್ನು ಕೂಗಿ ಕರೆದು ನೀರು ತರಲು ಹೇಳಿದಳು. ಕನಕಾಂಗಿ ತಂಬಿಗೆಯಲ್ಲಿ ನೀರನ್ನೂ ಲೋಟಗಳನ್ನೂ ತರುವಾಗ, "ಹೇಳಿ ಎಷ್ಟು ಹೊತ್ತಾಯ್ತು! ಇಷ್ಟು ಮೆಲ್ಲ ನಡೆದರೆ ಹೇಗೆ? ಸ್ವಲ್ಪ ಕೂಡಾ ಚುರುಕು ಇಲ್ಲ. ಮುಂದ ಎಮ್ಮೆ!" ಎಂದಳು ಪಾರಮ್ಮ.

ಕನಕಾಂಗಿಯ ಕೈಕಾಲುಗಳು ನಡುಗಿ ನೀರು ಕೆಳ ಗೆಲ್ಲಾ ಚೆಲ್ಲಿತು. ಅವಳ ಸೀರೆಯೂ ಒದ್ದೆಯಾಯಿತು.

"ನೋಡಿದಿರಾ ಕಾವೇರಮ್ಮ! ಇದು ಇವಳ ರೀತಿ. ಏನಾದರೂ ಹೇಳಿದರೆ ತೀರಿತು. ಕೈಲಿದ್ದದ್ದು ನೆಲಕ್ಕೇ!" ಎಂದಳು.

"ಹೌದೌದು. ಪಾಪ. ಹೊಸತಾಗಿ ನಿಮ್ಮ ಮನೆಗೆ ಬಂದ ಹುಡುಗಿ. ಇಲ್ಲಿನ ರೀತಿ ನೀತಿ ಹೇಗೋ ಅಂತ ಹೆದರಿಕೊಂಡೇ ಇರುತ್ತಾಳೆ. ನನಗೂ ಮದುವ್ಯಾದ ಹೊಸತಿನಲ್ಲಿ ಹೀಗೇ ಆಗ್ತಾ ಇತ್ತು. ಇದರಿಂದಾಗುವ ನಷ್ಟ ತಪ್ಪಿಸಬೇಕಾದರೆ ಸೊಸೆಯನ್ನು ನಮ್ಮ ಮಗಳು ಅಂದುಕೊಂಡೇ ಮಾತಾಡಿಸ ಬೇಕು. ಆಗ ಹೀಗೆಲ್ಲಾ ಆಗದು" ಎಂದಳು ಕಾವೇರಮ್ಮ.

ಈ ಮಾತು ಪಾರಮ್ಮನ ಮನಸ್ಸಿಗೆ ನಾಟಿತು. ಆಗಿನಿಂದ ಸೊಸೆಯನ್ನು ಬಯ್ಯುವುದನ್ನು ಬಿಟ್ಟಳು. ಪಾರಮ್ಮನಲ್ಲಿ ಬಂದ ಮಾರ್ಪಾಡನ್ನು ನೋಡಿ ವೆಂಕಟಾಚಲಪತಿಗೆ ಸಂತೋಷವಾಯಿತು.

ಆದರೆ ನಿಜಕ್ಕೂ ಕನಕಾಂಗಿ ಅಂತಹ ಹೆದರಿಕೆಯ ವಳಾಗಿರಲೇ ಇಲ್ಲ. ತನ್ನ ತಾಯಿಯ ಕೋಪದ ಗುಣವನ್ನು ಬದಲಾಯಿಸಲಿಕ್ಕಾಗಿ ರಂಗರಾಜನೇ ತನ್ನ ಹೆಂಡತಿಗೆ ಹಾಗೆ ವರ್ತಿಸಲು ಹೇಳಿದ್ದನು. ಇದು ಅವರಿಬ್ಬರ ಹೊರತು ಬೇರೆ ಯಾರಿಗೂ ತಿಳಿಯದು. ಈ ನಟನೆ ಫಲಿಸಿ, ಪಾರಮ್ಮನ ಸಿಡುಕುತನ ಸಪ್ಪಗಾಗಿ ಹೋಯಿತು.





# ಶಿವಪುರಾಣ

ಶಿವ ಪಾರ್ವತಿಯರ ವಿವಾಹವು ನಡೆದುದನ್ನು ನೋಡಿ ಎಲ್ಲರಿಗೂ ಬಹುದೊಡ್ಡ ಭಾರ ಇಳಿಸಿದಷ್ಟು ಸಂತೋಷವಾಯಿತು. ಎಲ್ಲರೂ ಶುಭ ಫಲದ ನಿರೀಕ್ಷೆಯಲ್ಲಿರುವಾಗ, ದಿನಗಳು ಕ್ರಮಿಸಿದಂತೆ ತಾರಕಾಸುರನ ಭಯವು ಹೆಚ್ಚುತ್ತಾ ಬರತೊಡಗಿತು. ಶಿವ ಪಾರ್ವತಿಯರು ಇನ್ನೂ ನೂತನ ದಂಪತಿಗಳಂತೆಯೇ ಇರುವುದನ್ನು ನೋಡಿ ದೇವತೆಗಳು ಸಹನೆಗೆಡುತ್ತ ಬಂದರು. ಕಡೆಗೆ ಅವರೆಲ್ಲಾ ಒಂದು ದಿನ ಬ್ರಹ್ಮನ ಬಳಿಗೆ ಹೋಗಿ, "ಓ ಪಿತಾಮಹಾ! ನೀನು ಕೊಟ್ಟ ವರಗಳ ಮೂಲಕವಾಗಿ ನಾವೆಲ್ಲಾ ನರಕ ಬಾಧೆಯನ್ನು ಅನುಭವಿಸುತ್ತಿದ್ದೇವೆ. ಇನ್ನೆಷ್ಟು ಕಾಲ ಹೀಗೆ ಅನುಭವಿಸಬೇಕೋ ತಿಳಿಯದಾಗಿದೆ. ಶಿವಪಾರ್ವತಿಯರ ಕಲ್ಯಾಣದಿಂದ ಒಳ್ಳೆಯದಾಗುವುದೆಂದು ನೋಡಿದರೆ ಅದೂ ಕಾಣುವುದಿಲ್ಲ. ತಾರಕಾಸುರನು ಸತ್ತ ಹೊರತು ನಮಗೆ ಬೆಳಗಾಗುವುದಿಲ್ಲ. ನೀವೇ ಏನಾದರೂ ಮಾಡಿ ನಮ್ಮ ಕಷ್ಟ ವಿಮೋಚನೆ ಮಾಡಬೇಕು" ಎಂದರು.

ಬ್ರಹ್ಮನು ಅವರೊಂದಿಗೆ, "ನಾನು ತಾರಕಾಸುರನಿಗೆ ಅಸಾಧಾರಣವಾದ ವರಗಳನ್ನು ಕೊಟ್ಟ ಮಾತು ನಿಜವೇ. ಅವನಿಗೆ ವರಗಳನ್ನು ಕೊಡದಿರಲು ಹೇಗೆ ಸಾಧ್ಯ ? ಒಳ್ಳೆಯವರಾದರೂ, ಕೆಟ್ಟವರಾದರೂ ತಪಸ್ಸನ್ನು ಮಾಡಿದ ಮೇಲೆ ವರವನ್ನು ಕೊಟ್ಟು ತೀರಲೇ ಬೇಕಾಗುತ್ತದೆ. ಅವರು ಕೆಟ್ಟ ಉದ್ದೇಶದವರೆಂದುಕೊಂಡು ವರ ಕೊಡದೆ ಸುಮ್ಮನಿದ್ದರೆ, ಅವರ ತಪಸ್ಸಿನಿಂದ ಹುಟ್ಟಿದ ಬೆಂಕಿ ಲೋಕಗಳನ್ನು ದಹಿಸುತ್ತದೆ. ಅಂತಹ ಆಪತ್ತಿನಿಂದ ಕಾಪಾಡಲಿಕ್ಕಾಗಿ ಅವರು ಕೇಳುವ ವರವನ್ನು ಕೊಡಲೇಬೇಕಾಗುತ್ತದೆ. ಆ ವರಗಳ ಸಹಾಯದಿಂದ ಅವರು ಲೋಕಗಳನ್ನು ಪೀಡಿಸುತ್ತಾರೆ. ಆ ಕಾರಣದಿಂದ ಅವರನ್ನು ಕೊಲ್ಲಬೇಕಾದ ಅಗತ್ಯವೂ ಬರುತ್ತದೆ. ಬನ್ನಿ, ನಾವೀಗ ವಿಷ್ಣುವಿನ ಹತ್ತಿರ ಹೋಗಿ ನಮ್ಮ ಕಷ್ಟಗಳನ್ನು ಹೇಳಿಕೊಳ್ಳೋಣ" ಎಂದನು.

ಎಲ್ಲರೂ ಕೂಡಿ ವಿಷ್ಣುವಿನ ಬಳಿಗೆ ಹೋಗಿ ತಾರಕಾಸುರನು ಕೊಡುವ ಕಷ್ಟಗಳನ್ನು ಕುರಿತು

ಹೇಳಿಕೊಂಡರು. ಅದನ್ನೆಲ್ಲ ಕೇಳಿ ಮಹಾವಿಷ್ಣು ಮುಗುಳು ನಗುತ್ತ "ಪಾರ್ವತೀ ಪರಮೇಶ್ವರರು ಮಹಾ ದಂಪತಿಗಳಾದರಷ್ಟೆ ? ಅವರಿಗೆ ಕುಮಾರನು ಹುಟ್ಟಿದ ಕೂಡಲೇ ನಿಮ್ಮೆಲ್ಲರ ಕಷ್ಟಗಳೂ ತೀರಿ ಹೋಗುತ್ತವೆ. ಎಲ್ಲದಕ್ಕೂ ಕಾಲವು ಕೂಡಿ ಬರ ಬೇಕಲ್ಲವೆ ? " ಎಂದನು.

"ಶಿವ ಪಾರ್ವತಿಯರ ದಾಂಪತ್ಯವು ಪ್ರಾರಂಭ ವಾಗಿ ಬಹಳ ಕಾಲವಾಯಿತು. ಇನ್ನೂ ಅವರಿಗೆ ಮಗನು ಹುಟ್ಟಲಿಲ್ಲ. ನಮ್ಮ ಚಿಂತೆಯೇ ಶಿವನಿಗೆ ಇರುವಂತೆ ಕಾಣುವುದಿಲ್ಲ. ನೀನು ಬಂದು ಶಿವನನ್ನು ನೋಡಿ ನಮ್ಮ ಗೋಳನ್ನು ಅವನಿಗೆ ಸ್ವಲ್ಪ ಮನ ವರಿಕೆಯಾಗುವಂತೆ ಹೇಳಬೇಕು" ಎಂದು ದೇವತೆ ಗಳು ವಿಷ್ಣುವನ್ನು ಪ್ರಾರ್ಥಿಸಿಕೊಂಡರು.

ವಿಷ್ಣು ಅದಕ್ಕೆ ಒಪ್ಪಿ, ಅವರನ್ನೆಲ್ಲಾ ಕರೆದು ಕೊಂಡು ಕೈಲಾಸಕ್ಕೆ ಹೊರಟನು. ಕೈಲಾಸದಲ್ಲಿ ಶಿವ ಭವನದ ಸುತ್ತಲೂ ನಂದೀಶ್ವರನು ತಿರುಗಾಡಿ ಕೊಂಡಿದ್ದನು. ಅವನೊಂದಿಗೆ ಬೇರೆ ಗಣಗಳೂ ಕಾವಲು ಕಾಯುತ್ತಿದ್ದವು. ವಿಷ್ಣು ನಂದೀಶ್ವರನನ್ನು ನೋಡಿ, "ನಾವು ಶಿವನನ್ನು ನೋಡಲು ಬಂದಿದ್ದೇವೆ. ನಮ್ಮನ್ನು ಒಳಕ್ಕೆ ಬಿಡು" ಎಂದನು.

"ನನ್ನನ್ನು ಕ್ಷಮಿಸಬೇಕು. ಶಿವ ಪಾರ್ವತಿಯರು ಏಕಾಂತದಲ್ಲಿದ್ದಾರೆ. ಯಾರನ್ನೂ ಒಳಗೆ ಬಿಡಬಾರ ದೆಂದು ಶಿವನ ಆಜ್ಞೆ. ಅದನ್ನು ಪಾಲಿಸಬೇಕಾದುದು ನಮ್ಮ ವಿಧಿ" ಎಂದನು ನಂದೀಶ್ವರ.

ವಿಷ್ಣು ದೇವತೆಗಳನ್ನು ನೋಡಿದನು. ದೇವತೆಗಳು ಏನೂ ತೋರದೆ ಮುಖ ಬಾಡಿಸಿಕೊಂಡರು. ಅವರು ಏತಕ್ಕಾಗಿ ಬಂದರೋ ಆ ಕೆಲಸಕ್ಕೆ ವಿಘ್ನ ಬಂದಿತು. ಆದುದರಿಂದ ವಿಷ್ಣು ದೇವತೆ ಗಳನ್ನು ನೋಡಿ, "ನೀವುಗಳು ಪಾರ್ಥಿವ ಲಿಂಗವನ್ನು ತಯಾರು ಮಾಡಿ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸುತ್ತ ಪೂಜಿಸಿರಿ. ಅದರಿಂದ ಶಿವನು ಪ್ರಸನ್ನನಾಗಿ ದರ್ಶನ ಕೊಡುತ್ತಾನೆ" ಎಂದು ಹೇಳಿದನು.

ಅದರಂತೆ ದೇವತೆಗಳು ಮಣ್ಣಿನಿಂದ ಪಾರ್ಥಿವ ಲಿಂಗವನ್ನು ತಯಾರು ಮಾಡಿ, ಪಂಚಾಕ್ಷರೀ ಮಂತ್ರ



ಜಪಿಸುತ್ತ, ಷೋಡಶೋಪಚಾರಗಳಿಂದ ಪೂಜಿಸಿ, "ಹರ ಹರ ಮಹದೇವ ಶಂಭೋ!" ಎಂದು ಗಟ್ಟಿಯಾಗಿ ಕೂಗಿದರು. ಅವರ ಕೂಗು ಎಲ್ಲಾ ದಿಕ್ಕುಗಳಲ್ಲಿಯೂ ಸೆಲೆಗೊಟ್ಟಿತು.

ಸ್ತೋತ್ರಪ್ರಿಯನಾದ ಶಿವನು ಅದನ್ನು ಕೇಳಿ, ಸೀದಾ ಬಾಗಿಲ ಬಳಿಗೆ ಬಂದು, "ದೇವತೆಗಳೇ, ನನ್ನನ್ನೇಕೆ ಹೀಗೆ ಕೂಗಿ ಕರೆದಿರಿ?" ಎಂದು ಕೇಳಿದನು.

ಬ್ರಹ್ಮನೇ ಮೊದಲಾದವರು ಅವನಿಗೆ ಕೈಮುಗಿದು, "ಅಹೋ ಪರಮೇಶ್ವರಾ! ತಾರಕಾಸುರನ ದುಷ್ಕೃರ್ಯಗಳು ದಿನದಿನಕ್ಕೂ ಹೆಚ್ಚಾಗುತ್ತಿವೆ. ಯಜ್ಞ ಯಾಗಗಳು ನಡೆಯದಂತೆ ಋಷಿಗಳನ್ನು ನಾನಾ ವಿಧವಾಗಿ ಹಿಂಸಿಸುತ್ತಾನೆ. ತಾರಕಾಸುರನನ್ನು ಕೊಲ್ಲಲು ನಿನ್ನ ಅಂಶದಿಂದ ನಮ್ಮನ್ನು ರಕ್ಷಿಸು ವಂತಹ ಒಬ್ಬ ಮಗನನ್ನು ಕರುಣಿಸು ದೇವಾ!" ಎಂದು ಬೇಡಿಕೊಂಡರು.

ಈ ಮಾತು ಕೇಳಿದ ಕೂಡಲೇ ಶಿವನು ಅಭಯ ಹಸ್ತವನ್ನೆತ್ತಿ "ಚಿಂತಿಸಬೇಡಿರಿ. ಬೇಗದಲ್ಲೇ ನಿಮ್ಮ ಕಷ್ಟ ತೀರುತ್ತದೆ" ಎಂದು ಎಲ್ಲರನ್ನೂ ಕಳುಹಿ ಸಿದನು, ಆಮೇಲೆ ಶಿವನು ತನ್ನ ಅಂಶದಿಂದ, ಮಾರ್ಗ ಶಿರ, ಷಷ್ಠಿ, ಧನಿಷ್ಠಾ ನಕ್ಷತ್ರ, ವೃಶ್ಚಿಕ ಲಗ್ನದಲ್ಲಿ ಒಬ್ಬ ಮಗನನ್ನು ಸೃಷ್ಟಿಸಿದನು. ಆ ಬಾಲನಿಗೆ ಆರು ಮುಖಗಳು, ಹನ್ನೆರಡು ಕೈಗಳು ಇದ್ದುವು, ಶರೀರವು ವಜ್ರ ಸದೃಶವಾಗಿತ್ತು.

ಆ ಹುಡುಗನನ್ನು ವಾಯುದೇವನು ಹೊತ್ತು ಕೊಂಡು ಹೋಗಿ ಗಂಗಾತೀರದ ಹುಲ್ಲುಗಳ ನಡುವೆ ಇರಿಸಿದನು. ಇದನ್ನು ತಿಳಿದು ಆರು ಮಂದಿ ಮುನಿ ಪತ್ನಿಯರು ಗಂಗಾತೀರಕ್ಕೇ ಬಂದು ಆರು ಮುಖಗಳ ಮಗುವನ್ನು ನೋಡಿದರು. ಆಗಲೇ ಅವರೆಲ್ಲ ರಲ್ಲಿಯೂ ಸ್ತನ್ಯವು ತುಂಬಿಕೊಂಡಿತು. ಶಿವ ಬಾಲನು ಆರು ಮುಖಗಳಿಂದ ಆರು ಮಂದಿ ತಾಯಿಯರ ಹಾಲನ್ನು ಕುಡಿದನು. ಈ ಅದ್ಭುತ ಬಾಲನನ್ನು ನೋಡಿ ದೇವತೆಗಳೆಲ್ಲಾ ಸಂತೋಷಪಟ್ಟರು.

ಸ್ವತಃ ಬ್ರಹದೇವನೇ ಬಂದು ಆರು ಮುಖಗಳ ಮಗುವನ್ನು ನೋಡಿದನು. ಆ ಮಗುವಿಗೆ ಜಾತ





ಕರ್ಮ, ನಾಮಕರಣಗಳನ್ನು ಬ್ರಹ್ಮನೇ ಮಾಡಿದನು. ಆ ಹುಡುಗನೇ ಕುಮಾರಸ್ವಾಮಿ. ಅವನಿಗೆ ಷಣ್ಮುಖನೆಂದೂ, ಸ್ಕಂಧನೆಂದೂ, ಗುಹನೆಂದೂ ಅನೇಕ ಹೆಸರುಗಳು ಬಂದವು. ಋಷಿಗಳೂ ದೇವತೆಗಳೂ ಆ ಬಾಲನನ್ನು ನೋಡಿ ಹರಸಿದರು.

ಮುನಿ ಪತ್ನಿಯರು ಕುಮಾರಸ್ವಾಮಿಯೊಂದಿಗೆ "ಅಪ್ಪಾ, ನಾವು ನಿನಗೆ ಹಾಲೂಡಿಸಿದೆವೆಂಬುದರಿಂದಲೋ ಏನೋ, ನಮ್ಮನ್ನು ನಮ್ಮ ಪತಿಗಳು ಬಿಟ್ಟುಬಿಟ್ಟಿದ್ದಾರೆ. ನಮಗೆ ಇನ್ನು ಯಾರು ದಿಕ್ಕು ? ನೀನೇ ಹೇಳಪ್ಪಾ" ಎಂದರು.

"ನಾನು ನಿಮ್ಮ ಮಗನಾಗಿದ್ದೇನೆ. ನೀವುಗಳು ನನ್ನ ತಾಯಿಗಳಾದಿರಿ. ಮತ್ತೇಕೆ ಚಿಂತೆ ? ಆದುದರಿಂದ ನೀವು ನನ್ನೊಂದಿಗೇ ಇದ್ದುಬಿಡಿರಿ" ಎಂದನು ಕುಮಾರಸ್ವಾಮಿ.

ಆಮೇಲೆ ಕುಮಾರಸ್ವಾಮಿ ದಿನದಿನ ಪ್ರವರ್ಧಮಾನನಾಗುತ್ತ ಬೆಟ್ಟಗಳ ಮೇಲೆ ತಿರುಗಿ ಆಡುತ್ತ, ಸಿಂಹಗಳನ್ನೂ, ಹುಲಿಗಳನ್ನೂ ಹಿಡಿದು ತನ್ನಿಷ್ಟ ಪ್ರಕಾರ ಆಡಿಸುತ್ತ, ಸವಾರಿಮಾಡುತ್ತ ಬರುತ್ತಿದ್ದನು. ಅವನಿಗೆ ಶಿವನ ಬಿಲ್ಲು ದೊರಕಿತು. ಆ ಬಿಲ್ಲಿನ ಪ್ರಭಾವವೇನೆಂದು ನೋಡುವ ಕುತೂಹಲದಿಂದ ಅದಕ್ಕೆ ಬಾಣಗಳನ್ನು ಹೂಡಿ ಪ್ರಯೋಗಿಸಿ ಕ್ರೌಂಚ ಪರ್ವತದ ಶಿಖರವನ್ನು ಖಂಡಿಸಿದನು.

ಆದನ್ನು ನೋಡಿ ಆ ಪರ್ವತದ ಮೇಲಿದ್ದ ರಾಕ್ಷಸರು ಕುಮಾರಸ್ವಾಮಿಯ ಮೇಲೆ ಕೆರಳಿ ಯುದ್ಧಕ್ಕೆ ಬಂದರು. ಬಾಲ ಕುಮಾರಸ್ವಾಮಿ ಸ್ವಲ್ಪವೂ ಹೆದರದೆ ಅವರೆಲ್ಲರನ್ನೂ ಲೀಲಾಜಾಲವಾಗಿ ಕೊಂದುಬಿಟ್ಟನು.

ಇಷ್ಟಾಗುವಾಗ ಶಿವಪಾರ್ವತಿಯರಿಗೆ ಇಪ್ಪತ್ತೊಂದು ಮಕ್ಕಳು ಹುಟ್ಟಿದರು. ಅವರೆಲ್ಲರೂ ಬೇರೆ ಬೇರೆ ಗಣಗಳಿಗೆ ಮೂಲ ಪುರುಷರಾಗಿ ಗಣಪತಿಗಳು ಎನಿಸಿಕೊಂಡರು. ಹೀಗೆ ಕೈಲಾಸದಲ್ಲಿ ಶಿವ ಸಂಸಾರವು ಬೆಳೆಯಿತು.

ಶಿವನು ನಂದೀಶ್ವರನ ಮೂಲಕವಾಗಿ ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ದೇವತೆಗಳನ್ನೂ, ಗಂಗಾ ತೀರದಲ್ಲಿರುವ ಕುಮಾರಸ್ವಾಮಿಯನ್ನೂ, ಅವನ ತಾಯಂದಿರಾದ ಆರುಮಂದಿ ಕೃತ್ತಿಕೆಯರನ್ನೂ ಕೈಲಾಸಕ್ಕೆ ಕರೆಯಿಸಿದನು. ನಂದೀಶ್ವರನು ಅವರೆಲ್ಲರನ್ನೂ ಪುಷ್ಪಕ ವಿಮಾನದಲ್ಲಿ ಕೈಲಾಸಕ್ಕೆ ಕರೆದುಕೊಂಡು ಬಂದನು.

ಪಾರ್ವತೀ ಪರಮೇಶ್ವರರು ಕುಮಾರಸ್ವಾಮಿಗೆ ಇದಿರಾಗಿ ಹೋಗಿ ಅವನನ್ನು ಗಾಢಾಲಿಂಗನಮಾಡಿ, ಕರೆದುಕೊಂಡು ಬಂದು ಸಭೆಯಲ್ಲಿ ತಮ್ಮ ಪಕ್ಕದಲ್ಲಿ ಕುಳ್ಳಿರಿಸಿಕೊಂಡರು. ಒಂದು ಬದಿಯಲ್ಲಿ ದೇವತೆಗಳೂ, ಮತ್ತೊಂದು ಬದಿಯಲ್ಲಿ ಶಿವಗಣಗಳೂ ಸೇರಿದ ಮಹಾಸಭೆಯದು.

ಆಗ ಬ್ರಹ್ಮನು ಕುಮಾರಸ್ವಾಮಿಯ ಪಕ್ಕದಲ್ಲಿ ನಿಂತುಕೊಂಡು, "ಪಾರ್ವತೀ ಪರಮೇಶ್ವರರೇ !



ಕುಮಾರಸ್ವಾಮಿ ಎಂಬ ಹೆಸರಿನ ನಿಮ್ಮ ಈ ಕುಮಾರನು ಈ ದಿನ ಕೈಲಾಸಕ್ಕೆ ಬಂದಿದ್ದಾನೆ. ನಾಳೆಯ ಶುಭಮುಹೂರ್ತದಲ್ಲಿ ಇವನನ್ನು ದೇವ ಸೇನಾಪತಿಯಾಗಿ ಅಧಿಕಾರಾಭಿಷೇಕ ಮಾಡಬೇಕು. ಇದಕ್ಕೆ ಎಲ್ಲರೂ ಒಮ್ಮನಸ್ಸಿನಿಂದ ಒಪ್ಪಬೇಕು. ಲೋಕ ಕಲ್ಯಾಣಕ್ಕೆ ಹೀಗೆ ಮಾಡುವುದು ಒಳ್ಳೆಯದು" ಎಂದನು.

ಬ್ರಹ್ಮನ ಮಾತನ್ನು ಕೇಳಿ ಸಭೆಯಲ್ಲಿರುವವರೆಲ್ಲಾ ಸಂತೋಷಪಟ್ಟರು. ಪಾರ್ವತೀ ಪರಮೇಶ್ವರರು ದೇವತೆಗಳೆಲ್ಲರ ಸಮುಕ್ಷಮದಲ್ಲಿ ಕುಮಾರಸ್ವಾಮಿಗೆ ಉಪನಯನವನ್ನು ಮಾಡಿದರು. ಅನಂತರ ಬ್ರಹ್ಮನ ಪೌರೋಹಿತ್ಯದಲ್ಲಿಯೇ ಕುಮಾರಸ್ವಾಮಿಗೆ ದೇವ ಸೇನಾಪತಿಯಾಗಿ ಅಭಿಷೇಕವೂ ನಡೆಯಿತು. ಬ್ರಹ್ಮಾಂಡವೆಲ್ಲಾ ಜಯ ಘೋಷದಿಂದ ತುಂಬಿತು.

ಆಗ ಪಾರ್ವತೀ ಪರಮೇಶ್ವರರು ಕುಮಾರಸ್ವಾಮಿ ಯೊಂದಿಗೆ, "ಅಪ್ಪಾ, ನೀನೀಗ ದೇವ ಸೇನಾಪತಿ. ನೀನು ದೇವೇಂದ್ರನ ಹಿತಕಾರಿಯಾಗಿದ್ದು ಮೂರು ಲೋಕಗಳನ್ನೂ ಆಪತ್ತುಗಳಿಂದ ರಕ್ಷಿಸುತ್ತಿರಬೇಕು. ದುಷ್ಟರನ್ನೂ ಪಾಪಿಗಳನ್ನೂ, ಭೂಭಾರಕ್ಕೆ ಕಾರಣ ರಾಗುವವರನ್ನೂ ಸಂಹರಿಸಬೇಕು. ಹೀಗೆ ನೀನು ಬಹು ದೊಡ್ಡವನೆಂದು ಲೋಕದಲ್ಲಿ ಗೌರವ ಹೊಂದಿ ಕೊಂಡಿರು. ಚಿರಂಜೀವಿಯಾಗಿರು" ಎಂದು ಹೇಳಿ ಆಶೀರ್ವಾದ ಮಾಡಿದನು.

ಅನಂತರ ಸ್ವರ್ಗಲೋಕದಲ್ಲಿ ವಿಶ್ವಕರ್ಮನಿಂದ ಕುಮಾರಸ್ವಾಮಿಗೆ ತಕ್ಕುದಾದ ಒಂದು ಭವನವನ್ನು ಕಟ್ಟಿಸಿದರು.

ಪಾರ್ವತೀ ಪರಮೇಶ್ವರರು ಕುಮಾರಸ್ವಾಮಿ ಯೊಂದಿಗೆ, "ಅಪ್ಪಾ, ನಿನಗಾಗಿ ಭವನವು ಸಿದ್ಧ ವಾಯಿತು. ನೀನು ಆ ಭವನದಲ್ಲಿ ನಿವಾಸಮಾಡಿ ಕೊಂಡಿರು. ನಿನಗೆ ಬೇಕಾದುದನ್ನೆಲ್ಲಾ ಅಲ್ಲಿಯೇ ಸ್ವತಂತ್ರವಾಗಿ ಮಾಡಿಕೊಂಡಿರು" ಎಂದರು.

ಪಾರ್ವತೀದೇವಿ ಕುಮಾರಸ್ವಾಮಿಗೆ ದೇವಿ ಗಣ ಗಳನ್ನು ಕೂಡಾ ಒಪ್ಪಿಸಿದಳು. ಆಗ ದೇವತೆಗಳು ಕುಮಾರಸ್ವಾಮಿಗೆ ಅನೇಕ ವರಗಳನ್ನೂ, ಅಸ್ತ್ರ ಶಸ್ತ್ರ ಆಯುಧಗಳನ್ನೂ ಕೊಟ್ಟು, ಕುಮಾರಸ್ವಾಮಿಯ ಕೈಯಲ್ಲಿ ತಾರಕಾಸುರನ ಸಂಹಾರವಾಗಲೆಂದು ಹರಸಿದರು.

ಕುಮಾರಸ್ವಾಮಿ ಪಾರ್ವತೀ ಪರಮೇಶ್ವರರ ಉಪದೇಶಗಳನ್ನು ಶಿರದೊಳಾಂತು, ಎಲ್ಲಾ ದೇವತೆ ಗಳಿಗೂ ವಂದಿಸಿ ತನ್ನ ಗಣಗಳೊಂದಿಗೆ, "ಈಗ ನೀವೆಲ್ಲರೂ ತಾರಕಾಸುರನ ಪಟ್ಟಣವನ್ನು ಮುತ್ತಿಗೆ ಹಾಕಲು ಬೇಕಾದ ಎಲ್ಲಾ ಸನ್ನಾಹಗಳನ್ನೂ ಮಾಡಿರಿ. ಮೊದಲು ನಾವು ಮಾಡಬೇಕಾದ ಕರ್ತವ್ಯ ಕರ್ಮ ಅದೇ" ಎಂದನು. ಕೂಡಲೇ ರಣಭೇರಿ ಮೊಳಗ ತೊಡಗಿತು, ಕುಮಾರಸ್ವಾಮಿ ತನಗಾಗಿ ನಿರ್ಮಾಣವಾದ ಭವನದೊಳಗೆ ಪ್ರವೇಶ ಮಾಡಿದನು.



ಇಲ್ಲಿ ಹೀಗಿರುವಾಗ ಅಲ್ಲಿ ಶೋಣಿತಪುರದಲ್ಲಿ ತಾರಕನಿಗೆ ಕುಮಾರಸ್ವಾಮಿಯ ವಾರ್ತೆಗಳೆಲ್ಲ ಬರುತ್ತಲೇ ಇದ್ದುವು. ತನ್ನನ್ನು ಕೊಲ್ಲಿಸಲಿಕ್ಕಾಗಿಯೇ ದೇವತೆಗಳು ಈ ಕುಮಾರಸ್ವಾಮಿಯನ್ನು ತಯಾರಿ ಸಿದ್ದಾರೆಂದೂ ಅವನಿಗೆ ತಿಳಿಯಿತು. ಆ ದೇವ ಸೇನಾ ಪತಿಯನ್ನು ಸಂಧಿಸಲು ಅವನೂ ಸಿದ್ಧನಾಗ ತೊಡಗಿದನು.

ತಾರಕನು ತನ್ನ ಮಂತ್ರಿಗಳನ್ನೂ, ಸೇನಾನಾಯಕ ರನ್ನೂ ಕರೆಯಿಸಿ, "ನಮ್ಮ ನಗರದ ಮೇಲೆ ದೇವತೆ ಗಳು ದಾಳಿ ಮಾಡಲಿರುವರೆಂದು ಚಾರರಿಂದ ತಿಳಿದು ಬಂದಿದೆ. ಅದನ್ನು ಇದಿರಿಸಲು ನೀವೆಲ್ಲರೂ ಸಿದ್ಧ ರಾಗಿರಬೇಕು" ಎಂದು ಆಜ್ಞೆ ಮಾಡಿದನು.

ತರುವಾಯ ಶಿವಭಕ್ತನಾದ ತಾರಕನು ಪಾರ್ಥಿವ ಲಿಂಗವನ್ನು ಮಾಡಿ, ಪೂಜೆಗೆ ಬೇಕಾದ ಪಂಚಬಿಲ್ವ ಗಳನ್ನೂ, ತೆಂಗಿನಕಾಯಿ, ಹೂಗಳು, ಪಂಚಾಮೃತ, ಸುಗಂಧ ದ್ರವ್ಯಗಳು ಮೊದಲಾದುವುಗಳಿಂದ ಷೋಡ ಶೋಪಚಾರ ಪೂಜೆ ಮಾಡಿದನು. ಅಭಿಷೇಕ, ಅಲಂಕಾರ, ಧೂಪದೀಪ ನೈವೇದ್ಯಗಳನ್ನು ಮಾಡಿ ದನು. "ಈಶ್ವರಾ! ನಿನ್ನನ್ನು ಪೂಜಿಸಿದ್ದೇನೆ. ಪೂಜೆಗೆ ತಕ್ಕ ಫಲಿತವನ್ನು ನನಗೆ ಪ್ರಾಸಾದಿಸು ಸ್ವಾಮಿ!" ಎಂದು ಸಾಷ್ಟಾಂಗ ಪ್ರಣಾಮ ಮಾಡಿದನು.

ಅತ್ತ ಸ್ವರ್ಗದಲ್ಲಿ ಕುಮಾರಸ್ವಾಮಿ ದೇವತೆಗಳ ಗುರುವಾದ ಬೃಹಸ್ಪತಿ ನಿರ್ಣಯಿಸಿದ ಮುಹೂರ್ತ ದಲ್ಲಿ ರಣಭೇರಿ ಮೊಳಗಿಸಲು ತೊಡಗಿ, ದೇವ, ರುದ್ರ, ವೀರಭದ್ರ ಮತ್ತು ದೇವೀಗಣಗಳೊಂದಿಗೆ ಯುದ್ಧಕ್ಕೆ ಹೊರಟನು.

ಅವನ ಸೇನೆಗಳು ನಿರಾತಂಕವಾಗಿ ಶೋಣಿತಪುರದ ವರೆಗೂ ಬಂದು ನಗರವನ್ನು ಮುತ್ತಿಗೆ ಹಾಕಿ, ಶಿಬಿರದ ಏರ್ಪಾಟು ಮಾಡಿಕೊಂಡುವು. ಶಿಬಿರ ಮಧ್ಯದಲ್ಲಿ ಕುಮಾರಸ್ವಾಮಿ ದೇವೇಂದ್ರಾದಿಗ ಳೊಂದಿಗೆ ಕುಳಿತುಕೊಂಡು, "ತೀರಾ ಯುದ್ಧಕ್ಕೆ ಧುಮುಕುವ ಮೊದಲು ಸಂಧಿಯ ಪ್ರಯತ್ನ ಮಾಡ ಬೇಕೆಂದು ಹಿರಿಯರು ಹೇಳುತ್ತಾರೆ. ಈಗ ನಾವು ತಾರಕನಿಗೆ ಸಂಧಿಯ ರಾಯಭಾರ ಕಳುಹಿಸೋಣ. ಇದಕ್ಕೆ ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿದನು.

ಇದಕ್ಕೆ ದೇವೇಂದ್ರಾದಿಗಳು ಸಮ್ಮತಿಸಿದರು. ಕುಮಾರಸ್ವಾಮಿ ತನ್ನ ವಕ್ಷಸ್ಥಳವನ್ನು ತಟ್ಟಿದ ಕೂಡಲೇ ಮುಂದೆ ನಿಂತವನನ್ನು ನೋಡಿ, "ವಿಶಾಖಾ, ನೀನು ತಾರಕನ ಬಳಿಗೆ ಹೋಗಿ ನನ್ನ ಮಾತಾಗಿ ಹೀಗೆ ಹೇಳು. ಅದಕ್ಕೆ ಅವನ ಪ್ರತ್ಯುತ್ತರ ವೇನೆಂದು ತಿಳಿದುಕೊಂಡು ಬಾ" ಎಂದು ತಾರಕನಿಗೆ ಹೇಳಬೇಕಾದ ಮಾತನ್ನೂ ಹೇಳಿದನು.

ವಿಶಾಖನು ಅಲ್ಲಿಗೆ ಹೋದಾಗ ತಾರಕನು ಸಭೆ ನಡೆಸಿ, ತನ್ನ ನಗರದ ಮುತ್ತಿಗೆಯನ್ನು ಕುರಿತು ಆಲೋಚನೆ ಮಾಡಿಕೊಂಡಿದ್ದನು. ಆಗ ಬಂದ

ವಿಶಾಖನನ್ನು ನೋಡಿ ತಾರಕನು "ಯಾರು ನೀನು ? ಬಂದ ಕಾರ್ಯವೇನು ?" ಎಂದು ಕೇಳಿದನು.

ವಿಶಾಖನು ಅವನೊಂದಿಗೆ, "ತಾರಕಾ, ನೀನು ಶಿವಭಕ್ತನಾಗಿರುವವನು. ಶಿವಪುತ್ರನಾದ ಕುಮಾರಸ್ವಾಮಿಯ ರಾಯಭಾರಿಯಾಗಿ ಬಂದ ವಿಶಾಖನು ನಾನು" ಎಂದನು.

ತಾರಕನು ಸಂತೋಷದಿಂದ ವಿಶಾಖನಿಗೆ ಕುಳಿತುಕೊಳ್ಳಲು ಹೇಳಿ, ನನ್ನೊಂದಿಗೆ ಕುಮಾರಸ್ವಾಮಿ ಏನು ಹೇಳಿದ್ದಾನೆ ? ನನಗೆ ದೇವತೆಗಳು ವಿರೋಧಿಗಳೇ ಹೊರತು ಕುಮಾರಸ್ವಾಮಿ ವಿರೋಧಿಯಲ್ಲ" ಎಂದನು.

"ತಾರಕಾ, ನೀನು ಬಹಳಕಾಲದಿಂದ ಮೂರು ಲೋಕಗಳನ್ನೂ ಆಳಿರುವೆ. ನಿನ್ನ ಪರಿಪಾಲನೆಯಲ್ಲಿ ಲೋಕಗಳಿಗೆ ಸುಖ ಶಾಂತಿಗಳು ದೊರೆಯಲಿಲ್ಲ. ಇನ್ನು ಮೇಲೆ ನೀನು ಅಧಿಕಾರವನ್ನು ಇಂದ್ರನಿಗೆ ಬಿಟ್ಟುಕೊಟ್ಟು ಭೋಗವತಿಪುರಕ್ಕೆ ಹೊರಟು ಹೋಗಬೇಕು. ಇಲ್ಲದಿದ್ದರೆ ಕುಮಾರಸ್ವಾಮಿ ನಿನ್ನವರನ್ನೆಲ್ಲಾ ಕೊಂದು ಇಂದ್ರನಿಗೆ ನಿನ್ನ ಅಧಿಕಾರವನ್ನು ಕೊಡಿಸುತ್ತಾನೆ. ಈ ಮಾತುಗಳನ್ನು ನಿನ್ನೊಡನೆ ಹೇಳುವಂತೆ ಕುಮಾರಸ್ವಾಮಿ ನನ್ನನ್ನು ಕಳುಹಿಸಿದ್ದಾನೆ" ಎಂದನು ವಿಶಾಖ. ಅದನ್ನು ಕೇಳಿ ತಾರಕನು ಮಹಾ ಕೋಪದಿಂದ ಕಣ್ಣು ತಿರುಗಿಸುತ್ತ, "ನಾನು ಹೆದರಿ ಯಾವುದನ್ನೂ ಬಿಟ್ಟುಕೊಡಲಾರೆನು. ನಾಳೆ ಬೆಳಿಗ್ಗೆ ಯುದ್ಧಕ್ಕೆ ಬರುತ್ತೇನೆ. ಸಿದ್ಧವಾಗಿರಲು ಹೇಳು" ಎಂದು ಉತ್ತರಕೊಟ್ಟನು. ವಿಶಾಖನು ಅಲ್ಲಿಂದ ಹಿಂದಿರುಗಿದನು.

ಮರುದಿನ ಸೂರ್ಯೋದಯವಾಗುವಾಗ ಎರಡು ಪಕ್ಷಗಳ ಸೇನೆಗಳೂ ಯುದ್ಧಕ್ಕೆ ಸಿದ್ಧವಾದುವು. ಯುದ್ಧವೂ ಪ್ರಾರಂಭವಾಯಿತು. ಉಭಯ ಪಕ್ಷಗಳವರೂ ಪ್ರಾಣದ ಆಶೆಯಿಲ್ಲದೆ ಹೋರಾಡಿದರು. ತಾರಕನ ಪಕ್ಷದಲ್ಲಿ ಬಾಣಾಸುರ, ಜಂಬಾಸುರ, ಪ್ರಲಂಬಾಸುರ, ಅತಿಬಲ, ಶಂಭಾಸುರ, ಕುಂಭಾಸುರ ಮೊದಲಾದ ವೀರಾಧಿವೀರರಿದ್ದರು, ಕುಮಾರಸ್ವಾಮಿಯ ಪಕ್ಷದಲ್ಲಿ ವೀರಭದ್ರ, ಅಗ್ನಿಹೋತ್ರ, ಧರ್ಮ, ಸೂರ್ಯಚಂದ್ರರು ಮೊದಲಾದವರಿದ್ದರು.

ಯುದ್ಧವು ಅನೇಕ ದಿನಗಳವರೆಗೆ ನಡೆಯಿತು. ತಾರಕನು ಸೋಲುವ ಸೂಚನೆ ಸ್ವಲ್ಪವೂ ಕಾಣಲಿಲ್ಲ. ದೇವತೆಗಳಿಗೆ ಆಯಾಸವಾಗಲು ತೊಡಗಿತು. ಅವರ ಧೈರ್ಯವು ಪೂರ್ತಿ ಅಳಿಯುವ ಸಮಯದಲ್ಲಿ ಕುಮಾರಸ್ವಾಮಿ ಪಾಶುಪತಾಸ್ತ್ರವನ್ನು ಪ್ರಯೋಗಿಸಿದನು. ಅದು ತಾರಕನ ಸೈನ್ಯದ ಮೇಲೆ ಕೆಲವು ಸಾವಿರ ಸಿಡಿಲುಗಳ ಹಾಗೆ ಹೋಗಿ ಬಿತ್ತು. ರಾಕ್ಷಸ ಸೇನೆಗಳು ಚೆಲ್ಲಾಪಿಲ್ಲಿಯಾದುವು, ಉಳಿದವರೆಲ್ಲಾ ಸುಟ್ಟು ಬೂದಿಯಾಗಿ ಹೋದರು.





# ಪರೋಪಕಾರಿ

ಹಿಂದೆ ಬಸ್ರಾ ನಗರದಲ್ಲಿ ಅಜೀಜ್ ಎಂಬೊಬ್ಬ ಯುವಕನು ವರ್ತಕ ವೃತ್ತಿ ಮಾಡಿಕೊಂಡಿದ್ದನು. ಅವನು ಧನಿಕನಾಗಿದ್ದುದು ಮಾತ್ರವಲ್ಲದೆ, ವ್ಯಾಪಾರದಲ್ಲಿ ಒಳ್ಳೆಯ ಪ್ರಾಮಾಣಿಕನಾಗಿಯೂ ಇದ್ದನು. ಆದುದರಿಂದ ಎಲ್ಲರೂ ಅವನನ್ನು ಬಹಳ ಗೌರವದಿಂದ ನೋಡುತ್ತಿದ್ದರು. ಅವನ ವಿಶೇಷ ಗುಣವೇನೆಂದರೆ, ಯಾರಾದರೂ ಕಷ್ಟದಲ್ಲಿದ್ದುದು ಅವನಿಗೆ ತಿಳಿದುಬಿಟ್ಟರೆ, ಕೂಡಲೇ ಅವರಿಗೆ ಸಹಾಯಮಾಡುವನು. ಆದುದರಿಂದ ಆ ಪಟ್ಟಣದ ಪ್ರಜೆಗಳಿಗೆ ಅವನ ಮೇಲೆ ಎಣೆ ಇಲ್ಲದಷ್ಟು ಪ್ರೇಮಾಭಿಮಾನಗಳಿದ್ದುವು.

ಅಜೀಜ್ ಇರುವ ಮನೆಯ ನೆರೆಯಲ್ಲಿಯೇ ಸೈಯದನೆಂಬ ಮತ್ತೊಬ್ಬ ವರ್ತಕನಿದ್ದನು. ಜನರೊಳಗೆ ಅಜೀಜ್‌ನಿಗಿರುವ ಹೆಸರು ಪ್ರಖ್ಯಾತಿಗಳನ್ನು ನೋಡಿ ಸೈಯದನಿಗೆ ಸಹಿಸಲಾಗಲಿಲ್ಲ. ದಿನದಿನಕ್ಕೂ ಅಜೀಜನ ವ್ಯಾಪಾರವು ಅಭಿವೃದ್ಧಿಯಾಗುವುದನ್ನು ನೋಡಿ ಅಸೂಯೆಯಿಂದ ಸೈಯದನು ಹೊಟ್ಟೆ ಕಿವಿಚಿಕೊಳ್ಳುತ್ತಿದ್ದನು. ರಾತ್ರಿಯಲ್ಲಿ ಅವನಿಗೆ ಸರಿಯಾಗಿ ನಿದ್ದೆಯೂ ಬಾರದಾಯಿತು. ಮನೋವೇದನೆಯಿಂದ ಕೆಲವು ದಿನಗಳಲ್ಲಿ ಮಂಚ ಹಿಡಿದು ಹೊರಳತೊಡಗಿದನು. ಅವನ ಹೆಂಡತಿಗೆ ತುಂಬಾ ಭಯವೂ ಚಿಂತೆಯೂ ಹಿಡಿಯಿತು.

ಒಂದುದಿನ ಸೈಯದನ ಹೆಂಡತಿ ಅಜೀಜನ ಬಳಿಗೆ ಹೋಗಿ, ಅವನ ಸಂಪತ್ತುಗಳನ್ನೂ, ಕೀರ್ತಿ ಪ್ರತಿಷ್ಠೆಗಳನ್ನೂ ನೋಡಿ, ತನ್ನ ಗಂಡನು ರೋಗದಲ್ಲಿ ಬಿದ್ದಿರುವನೆಂದು ನಿಜ ಸಂಗತಿಯನ್ನು ಹೇಳಿ ಕಣ್ಣೀರು ತುಂಬಿಕೊಂಡಳು.

ಅದನ್ನೆಲ್ಲ ಕೇಳಿ ಅಜೀಜ್ ಅವಳೊಂದಿಗೆ, "ನೀನೇನೂ ಚಿಂತೆಪಡಬೇಡ. ನಿನ್ನ ಗಂಡನ ರೋಗ ಗುಣವಾಗುವ ಹಾಗೆ ನಾನು ಮಾಡುತ್ತೇನೆ. ಅವನು ಬೇಗದಲ್ಲೇ ಎಂದಿನಂತಾಗುತ್ತಾನೆ" ಎಂದು ಸಮಾಧಾನ ಹೇಳಿ ಕಳುಹಿಸಿದನು.

ಆ ರಾತ್ರಿ ಪೂರಾ ಅಜೀಜ್ ಚೆನ್ನಾಗಿ ಆಲೋಚನೆ ಮಾಡಿದನು. "ತನ್ನ ಸಂಪತ್ತುಗಳು ನೆರೆಮನೆಯವನ ಅಸೂಯೆಗೂ ಅನಾರೋಗ್ಯಕ್ಕೂ ಕಾರಣವಾಯಿತೆ? ಅಂತಹ ಸಂಪತ್ತುಗಳು ಇಲ್ಲದೆ ಹೋಗುವುದೇ ಒಳ್ಳೇದು" ಎಂದುಕೊಂಡು, ಬೆಳಂಜಾವದಲ್ಲಿ ಮನೆ ಬಿಟ್ಟು ಎತ್ತಲೋ ಹೊರಟು ಹೋದನು.



ಅಜೀಜ್ ಒಬ್ಬನೇ ನಡೆಯುತ್ತ ಸಾಯಂಕಾಲದ ಹೊತ್ತಿಗೆ ಒಂದು ಪಾಳುಬಿದ್ದ ಬಾವಿಯ ಹತ್ತಿರ ಸೇರಿದನು. ಬಾವಿಯ ಸುತ್ತಲೂ ಹಸಿರು ಹುಲ್ಲಿನ ಬಯಲು ಇದ್ದಿತು. ಅಜೀಜ್ ಬಾವಿಯ ದಂಡೆಯ ಮೇಲೆ ಕುಳಿತು, ಆಯಾಸ ಪರಿಹರಿಸಿಕೊಳ್ಳುತ್ತ ಹಾಗೆಯೇ ನಿದ್ದೆಗೆ ಇಳಿದನು. ಪುಣ್ಯವಶಾತ್ ಬಾವಿಗೆ ಬೀಳಲಿಲ್ಲ.

ಮರುದಿನ ಬೆಳಿಗ್ಗೆ ಕೆಲವು ಮಂದಿ ವರ್ತಕರು ಆ ದಾರಿಯಾಗಿ ಬರುತ್ತ, ಅಜೀಜ್‌ನನ್ನು ನೋಡಿ ಗುರುತು ಹಿಡಿದರು. ಅವನನ್ನು ನಿದ್ದೆಯಿಂದ ಎಬ್ಬಿಸಿ, ತಮ್ಮ ಹತ್ತಿರವಿದ್ದ ರೊಟ್ಟಿ, ಚಟ್ನಿ, ಹಾಲು ಮೊದಲಾದುವನ್ನು ಅವನಿಗೆ ಕೊಟ್ಟು, ಮೊದಲು ಹಸಿವೆ ತೀರಿಸಿಕೊಳ್ಳಲು ಹೇಳಿದರು. ಅದಾದ ಮೇಲೆ, "ಇಲ್ಲಿಗೇಕೆ ಬಂದೆ ಅಜೀಜ್ ?" ಎಂದು ಕೇಳಿದರು.

"ನನಗೆ ಜೀವಿತದ ಮೇಲೆ ವಿರಕ್ತಿ ಹುಟ್ಟಿತು. ಕಾರಣ ಕೇಳಬೇಡಿ. ಇನ್ನು ಮೇಲೆ ನಾನು ಯಾವ ವ್ಯಾಪಾರವನ್ನೂ ಮಾಡುವುದಿಲ್ಲ. ಶೇಷಾಯುಷ್ಯವನ್ನು ಹೀಗೆಯೇ ಕಳೆಯುತ್ತೇನೆ" ಎಂದನು ಅಜೀಜ್.

ಅಜೀಜನ ಸ್ವಭಾವನ್ನು ತಿಳಿದವರಾದುದರಿಂದ ಆ ವರ್ತಕರು ಅಜೀಜನಿಗೆ ಬೇಕಾದ ವಸತಿಗಳನ್ನು ಏರ್ಪಾಟು ಮಾಡಲು ತಮ್ಮ ನೌಕರರಿಬ್ಬರನ್ನು ಅಲ್ಲಿ ಬಿಟ್ಟು ಹೊರಟು ಹೋದರು. ಹೋಗುವಾಗ, ಹಸಿರುಹುಲ್ಲು ಮೈದಾನದ ಬಾವಿಯ ಹತ್ತಿರ ಒಬ್ಬ ಮಹಾತ್ಮನು ವಾಸ ಮಾಡುತ್ತಿದ್ದಾನೆಂದು ದಾರಿಯಲ್ಲಿ ಹತ್ತಿದ ಗ್ರಾಮಗಳ ಜನರಿಗೆ ತಿಳಿಸುತ್ತಾ ಹೋದರು.

ಈ ವಾರ್ತೆ ಕೇಳಿ ಬೇರೆ ಬೇರೆ ಗ್ರಾಮಗಳ ಜನರು ಆ ಬಾವಿಯ ಹತ್ತಿರ ಬಂದು, ಅಜೀಜ್‌ನನ್ನು ನೋಡಿ ವಂದಿಸಿ, ಅವನಿಗೊಂದು ಕುಟೀರ ನಿರ್ಮಿಸಿ ಕೊಟ್ಟರು. ಅಜೀಜನ ಮುಂದೆ ಕಷ್ಟಗಳನ್ನು ಹೇಳಿಕೊಂಡವರಿಗೆ ಸಮಾಧಾನವಾಗುವಂತೆ ಒಳ್ಳೊಳ್ಳೆಯ ಸಲಹೆಗಳನ್ನು ಹೇಳುತ್ತಿದ್ದನು. ಅದರಿಂದ ತೃಪ್ತರಾಗುವವರಿಂದ ಅವನಿಗೆ ಒಳ್ಳೆಯ ಗೌರವ ಮರ್ಯಾದೆಗಳು ಲಭಿಸ ತೊಡಗಿದುವು.

ಅಜೀಜ್ ವ್ಯಾಪಾರವನ್ನು ಬಿಟ್ಟು ಪಟ್ಟಣದಿಂದ ಎತ್ತಲೋ ಹೊರಟು ಹೋದನೆಂದು ತಿಳಿದು ಅಸೂಯಾರೋಗದಿಂದ ನರಳಿಕೊಂಡಿದ್ದ ನೆರೆಮನೆಯ ಸೈಯದನಿಗೆ ಸಂತೋಷವಾಯಿತು. ಅಂತೆಯೇ ಅವನು ಮಾಮೂಲು ಸ್ಥಿತಿಗೆ ಬರತೊಡಗಿದನು.

ಅಷ್ಟರಲ್ಲಿ ಅಜೀಜನ ಜೀವಿತದಲ್ಲಿ ಏರ್ಪಟ್ಟ ಹೊಸ ಪರಿಣಾಮದ ಸಂಗತಿ ಸೈಯ್ಯದನ ಕಿವಿಗೆ ಬಿತ್ತು. ಅದರಿಂದ ವಿಷಾದಗ್ರಸ್ತನಾದ ಸೈಯದನು, ಒಂದು ದಿನ ಅಜೀಜನನ್ನು ನೋಡಬೇಕೆಂದು ಹೊರಟನು.

ಸಾಯಂಕಾಲದ ಸಮಯದಲ್ಲಿ ಶಿಷ್ಯರ ನಡುವೆ ಕುಳಿತುಕೊಂಡು ಮಾತಾಡುತ್ತಿದ್ದ ಅಜೀಜನ ಬಳಿಗೆ ಹೋಗಿ ನಮಸ್ಕಾರ ಮಾಡಿದನು ಸೈಯದ್. ಅಜೀಜ್

ಅವನನ್ನು ನೋಡಿ, "ಚೆನ್ನಾಗಿರುವೆಯಾ?" ಎಂದನು. "ನಿಮ್ಮ ಹತ್ತಿರ ಒಂದು ಸಂಗತಿ ಗುಟ್ಟಾಗಿ ಹೇಳ ಬೇಕಾಗಿದೆ" ಎಂದನು ಸೈಯದ್.

ಅಜೀಜ್ ತನ್ನ ಶಿಷ್ಯರನ್ನೆಲ್ಲಾ ಹೊರಗೆ ಕಳುಹಿ ಸಿದನು. ಆಗ ಸೈಯದ್ "ಅಯ್ಯಾ, ನೀವು ನನ್ನ ಗುರುತು ಹಿಡಿದಿರೆಂದು ಕಾಣುತ್ತದೆ. ನಿಮ್ಮ ನೆರೆ ಮನೆಯಲ್ಲಿದ್ದ ಸೈಯದನೇ ನಾನು. ನಿಮ್ಮ ಹತ್ತಿರ ಒಂದು ಮುಖ್ಯ ವಿಷಯ ಹೇಳಲು ಬಂದೆನು. ಅದು ಈ ಸ್ಥಳದಲ್ಲಿ ಹೇಳುವಂಥಾದ್ದಲ್ಲ. ಸ್ವಲ್ಪ ಹಸಿರು ಗಾವಲಿನ ಕಡೆಗೆ ಹೋಗೋಣ. ಹೇಳುತ್ತೇನೆ" ಎಂದನು.

"ಆಗಲಿ ಹೋಗೋಣ" ಎಂದು ಅಜೀಜ್ ಅಲ್ಲಿಂದ ಎದ್ದು ಸೈಯದನನ್ನು ಅನುಸರಿಸಿದನು.

ಇಬ್ಬರೂ ದೂರದಲ್ಲಿರುವ ಹಸಿರು ಹುಲ್ಲು ಗಾವಲನ್ನು ಸೇರಿದರು. "ಆ ಬಾವಿಯಲ್ಲಿ ಒಂದು ವಿಚಿತ್ರವಿದೆ. ತೋರಿಸುತ್ತೇನೆ ಬನ್ನಿ" ಎಂದು ಸೈಯದ್ ಅಜೀಜನನ್ನು ಬಾವಿಯ ಬದಿಗೆ ಕರೆದು ಕೊಂಡು ಹೋದನು.

ಅಜೀಜ್ ಬಾವಿಯೊಳಗೆ ಬಗ್ಗಿ ನೋಡಿದನು. ಕೂಡಲೇ ಸೈಯದ್ ಅಜೀಜನನ್ನು ಬಲವಾಗಿ ಬಾವಿ ಯೊಳಗೆ ದೂಡಿ, ತನ್ನ ಮನೆಯ ದಾರಿ ಹಿಡಿದು ಹೋಗಿಬಿಟ್ಟನು.

ಅಜೀಜನಿಗೆ ಈಜು ಬಾರದು. ಆದರೆ ಆ ಬಾವಿ ಯಲ್ಲಿರುವ ಜಲದೇವತೆಗಳು ಬೀಳುವ ಅಜೀಜನನ್ನು ಹಿಡಿದುಕೊಂಡುವು. ಕಾರಣವೇನೆಂದರೆ ಅಜೀಜನ ಒಳ್ಳೆಯ ಗುಣಗಳು ಅವುಗಳಿಗೆ ತುಂಬ ಹಿಡಿಸಿತ್ತು. ಬಹುಕಾಲದವರೆಗೆ ನಿರ್ಮಾನುಷ್ಯವಾಗಿದ್ದ ಹುಲ್ಲು ಗಾವಲಿನ ಪ್ರಾಂತ ಅವನ ಬರುವಿಕೆಯ ನಂತರವೇ ಮಾನವರಿಂದ ಕಳಕಳಿಸ ತೊಡಗಿತ್ತು. ಅದಕ್ಕೆ ಕಾರಣನಾದವನನ್ನು ಜಲದೇವತೆಗಳು ಮುಳುಗಲು ಬಿಡದೆ ಹಿಡಿದು ಮೆಟ್ಟಿಲಿನ ಮೇಲೆ ಕೂಡಿಸಿದುವು.



"ನಿನ್ನನ್ನು ನೋಡಿ ನಮಗೆ ಬಹಳ ಆನಂದ ವಾಗಿದೆ. ನಿನ್ನ ಕಾರಣದಿಂದಾಗಿ ನಾಳೆ ಈ ಪ್ರಾಂತಕ್ಕೆ ಸುಲ್ತಾನನು ಬರುತ್ತಾನೆ" ಎಂದುವು ಜಲ ದೇವತೆಗಳು.

"ಅದೇಕೆ ?" ಕೇಳಿದನು ಅಜೀಜ್.

"ಸುಲ್ತಾನನ ಕುಮಾರಿಗೆ ದೆವ್ವ ಬಡಿದಿದೆ. ನಿನ್ನಿಂದ ಗುಣವಾಗುವುದೆಂದು ಅವನಿಗೆ ತಿಳಿಸಿದ್ದೇವೆ. ನೀನು ಸಾಕುವ ಕರೀಬೆಕ್ಕಿನ ಮೀಸೆಯ ಒಂದು ರೋಮವನ್ನು ತೆಗೆದು, ಸುಟ್ಟು ಅದರ ಹೊಗೆ ಯನ್ನು ರಾಜಕುಮಾರಿಯ ಮೂಗಿನ ಹತ್ತಿರ ತೋರಿಸಿದರೆ ದೆವ್ವ ಬಿಟ್ಟು ಹೋಗುತ್ತದೆ" ಎಂದುವು ಜಲದೇವತೆಗಳು. ಆಮೇಲೆ ಜಲದೇವತೆಗಳು ಅಜೀಜನನ್ನು ಮೇಲೆ ತಂದು ಬಿಟ್ಟುವು.

ಅಜೀಜ್ ಕುಟೀರವನ್ನು ಸೇರಿ ತನ್ನ ಕರೀಬೆಕ್ಕಿನ ಮೀಸೆಯ ಒಂದು ರೋಮವನ್ನು ಕಿತ್ತು ಜಾಗ್ರತೆ ಯಿಂದ ಇಟ್ಟುಕೊಂಡನು.

ಬೆಳಗಾದ ಮೇಲೆ ರಾಜಭಟರು ಬಂದು ಸುಲ್ತಾನನ ಆಗಮನ ವಾರ್ತೆಯನ್ನು ಅವನಿಗೆ ತಿಳಿಸಿದರು. ಆಮೇಲೆ ಯುವರಾಣಿಯನ್ನು ಅವನ ಬಳಿಗೆ ತರಲಾಯಿತು. ಅವಳು ಹುಚ್ಚಿಯ ಹಾಗೆ ಆಚೀಚೆ ನೋಡುತ್ತ, ಏನೇನೋ ಒಟಗುಟ್ಟುತ್ತ ಅವನ ಹತ್ತಿರ ಬಂದಳು.

ಅಜೀಜ್ ಭದ್ರಪಡಿಸಿಕೊಂಡಿದ್ದ ಬೆಕ್ಕಿನ ಮೀಸೆ ರೋಮವನ್ನು ತಾಂಬಾಣದ ಕೆಂಡಕ್ಕೆ ಹಾಕಿದನು. ಅದರಿಂದ ಹೊರಟ ಹೊಗೆಯನ್ನು ಯುವರಾಣಿಯ ಮೂಗಿನ ಹೊಳ್ಳೆಗಳ ಹತ್ತಿರ ತೋರಿಸಿದನು. ಕೂಡಲೇ ಯುವರಾಣಿ ನೆಲದಲ್ಲಿ ಬಿದ್ದಳು. ಸ್ವಲ್ಪ ಹೊತ್ತಿನ ಮೇಲೆ ಗಾಢ ನಿದ್ರೆಯಿಂದ ಎದ್ದವಳಂತೆ ಎದ್ದು ಕುಳಿತು ಮೌನವಾಗಿ ತಂದೆಯನ್ನು ನೋಡಿ ಎದ್ದು ನಿಂತಳು.

ಸುಲ್ತಾನನು ಆತ್ಮಾನಂದದಿಂದ ಪಕ್ಕದಲ್ಲಿದ್ದ ವಜೀರನನ್ನು ನೋಡಿ, " ಈ ಮಹನೀಯನನ್ನು ಹೇಗೆ ಗೌರವಿಸಬೇಕೆಂದು ನನಗೆ ತಿಳಿಯುವುದಿಲ್ಲ " ಎಂದನು.

" ಪ್ರಭೂ, ಯುವರಾಣಿಗೆ ಹಿಡಿದ ದೆವ್ವವನ್ನು ಬಿಡಿಸಿದವರಿಗೆ ಅವಳನ್ನು ಕೊಟ್ಟು ಮದುವೆ ಮಾಡುತ್ತೇನೆಂದು, ತಾವು ಆರು ತಿಂಗಳ ಹಿಂದೆ ನನ್ನೊಂದಿಗೆ ಹೇಳಿದ ಮಾತು ಮರೆತಿರಾ ?" ಎಂದನು ವಜೀರ.

" ಅದಕ್ಕೆ ಈ ಮಹಾನುಭಾವನು ಅಂಗೀಕರಿಸ ಬೇಕಷ್ಟೆ? " ಎಂದನು ಸುಲ್ತಾನ.

" ಆ ವಿಷಯ ನಾನು ನೋಡುತ್ತೇನೆ " ಎಂದು ಹೇಳಿ ವಜೀರನು ಸುಲ್ತಾನನ ಅಭಿಪ್ರಾಯವನ್ನು ಅಜೀಜನಿಗೆ ತಿಳಿಸಿದನು. ಯುವರಾಣಿಯನ್ನು ಮದುವೆಯಾಗಲು ಅಜೀಜ್ ಒಪ್ಪಿಕೊಂಡನು. ಆಮೇಲೆ ಯುವರಾಣಿಯೊಂದಿಗೆ ಅಜೀಜನ ಮದುವೆ ಬಹಳ ವೈಭವದಲ್ಲಿ ನಡೆಯಿತು.

ಮುಂದೆ ಬೇಗದಲ್ಲಿ ಸುಲ್ತಾನನು ಮೃತನಾದನು. ಅಜೀಜನೇ ಸಿಂಹಾಸನವೇರಿ ಸುಲ್ತಾನನೂ ಆದನು.

ಅಜೀಜನಿಗೆ ಬಂದ ಈ ಅದೃಷ್ಟವನ್ನು ಕೇಳಿ ಸೈಯದನ ಬುದ್ಧಿ ಕೆಟ್ಟಿತು. ಅವನು ಪೂರ್ತಿ ಹುಚ್ಚನೇ ಆದನು.

ಒಂದು ದಿನ ಸುಲ್ತಾನ್ ಅಜೀಜ್ ತನ್ನ ಪರಿವಾರ ದೊಂದಿಗೆ ನಗರ ಪರ್ಯಟನೆ ಮಾಡಿಕೊಂಡಿದ್ದಾಗ ಹರಕು ಪರಕು ವಸ್ತ್ರದಿಂದ ಹುಚ್ಚಾ ಬಟ್ಟೆ ಕಿರಿಚುತ್ತ ತಿರುಗುವ ಸೈಯದನನ್ನು ನೋಡಿದನು. ಅಜೀಜ್ ಅವನ ಗುರುತು ಹಿಡಿದು ಅವನನ್ನು ವೈದ್ಯಶಾಲೆಗೆ ಸೇರಿಸಿ ಮದ್ದು ಮಾಡಿಸಿದನು. ಅವನ ಹುಚ್ಚು ಇಳಿದು ಹೋದ ಮೇಲೆ, ಅವನಿಗೆ ಸಾವಿರ ಬಂಗಾರದ ನಾಣ್ಯಗಳನ್ನು ಕೊಡುವಂತೆ ಅಧಿಕಾರಿ ಗಳಿಗೆ ಅಜ್ಞೆ ಮಾಡಿದನು.



# ಆರ್ಕಿಟಿಕ್ ಸೀಲ್ ಜಲಚರಗಳು

ಆರ್ಕಿಟಿಕ್ ಸಮುದ್ರ ಪ್ರಾಂತದಲ್ಲಿ ಮಂಜು ಗಡ್ಡೆಗಳ ಮೇಲೆ ಸೀಲ್ ಜಲಚರಗಳ ಮರಿಗಳು ಮೆಲ್ಲ ಮೆಲ್ಲನೆ ಹರಿದಾಡಿಕೊಂಡಿರುವಾಗ, ಅವುಗಳ ಮೃದುವಾದ ಎಳೆ ಹಳದಿ ಬಣ್ಣದ ಮೇಲೆ ಸೂರ್ಯ ಕಿರಣಗಳು ಬಿದ್ದು ಮಿರಿಮಿರಿ ಹೊಳೆಯುತ್ತಿರುತ್ತವೆ. ಮುಗ್ಧ ಮುಖಗಳಿಂದ, ದೊಡ್ಡ ದೊಡ್ಡ ಊದಾ ಬಣ್ಣದ ಕಣ್ಣುಗಳಿಂದ ಸೀಲ್ ಮರಿಗಳು ಬಹು ಸುಂದರವಾಗಿರುತ್ತವೆ.

ಮಾರ್ಚಿ ತಿಂಗಳ ಪ್ರಾರಂಭದಿಂದ ಏಪ್ರಿಲ್ ಆಖೈರಿನವರೆಗೆ ಎರಡು ತಿಂಗಳ ಕಾಲಾವಧಿಯಲ್ಲಿ ಹುಟ್ಟುವ ಸೀಲ್ ಮರಿಗಳೆಲ್ಲಾ ಒಂದು ವಾರ ದಿನಗಳಿಗಿಂತ ಹೆಚ್ಚು ಕಾಲ ಜೀವಿಸಿರಲಾಗದೆ ಹೋಗುತ್ತವೆ. ಏಕೆಂದರೆ ಅವು ಹುಟ್ಟಿದ ಒಂದು ವಾರದೊಳಗೇ ಅವುಗಳ ಚರ್ಮಗಳ ಬಣ್ಣ ಊದಾವಾಗಿ ಬದಲಾಯಿಸುತ್ತದೆ. ಹಾಗೆ ಬದಲಾಗುವುದರೊಳಗೇ ಬೇಟೆಗಾರರು ಬಂದು ಅವುಗಳನ್ನು ಕೊಂದು ಚರ್ಮ ಸುಲಿದುಕೊಂಡು ಹೋಗುತ್ತಾರೆ. ಹೀಗೆ ಪ್ರತಿ ವರ್ಷ ಕೆಲವು ಸಾವಿರ ಜಲಚರಗಳು ಕೊಲ್ಲಲ್ಪಡುತ್ತವೆ. ಅವುಗಳ ಮೃದುವಾದ ಚರ್ಮಗಳು ಸಂಪನ್ನ ಸ್ತ್ರೀಯರು ಧರಿಸುವ ಕೋಟುಗಳ ತಯಾರಿಕೆಗೆ ಉಪಯೋಗವಾಗುತ್ತವೆ.

ಈ ಶತಕದ ಆರಂಭದಲ್ಲಿ ಈ ಪ್ರಾಂತದಲ್ಲಿ ಇಪ್ಪತ್ತು ಮಿಲಿಯನ್‌ವರೆಗಿದ್ದ ಈ ಜಲಚರಗಳು ಪ್ರಸ್ತುತ ಒಂದು ಮಿಲಿಯನ್‌ಗೆ ತಗ್ಗಿದೆ. ಇದೇ ರೀತಿ ಸಾಗಿದರೆ ಇನ್ನೊಂದು ಹತ್ತು ವರ್ಷಗಳಲ್ಲಿ ಈ ಜಲಚರ ಸಂತತಿ ನಿರ್ಮೂಲವಾಗಿ ಹೋಗುವ ಅಪಾಯವಿದೆ ಎನ್ನುವರು ನ್ಯೂ ಫೌಂಡ್‌ಲ್ಯಾಂಡಿಗೆ ಸೇರಿದ "ಗ್ರೀನ್‌ಪೀಸ್" ಸಂಸ್ಥೆಯವರು. ಈ ಸಂಸ್ಥೆ ಸೀಲ್ ಮರಿಗಳ ಬೇಟೆಯನ್ನು ನಿರೋಧಿಸಲು ಪ್ರಯತ್ನಿಸುತ್ತಿದೆ.

ಆರ್ಕಿಟಿಕ್ ಸೀಲ್ ಸಂತತಿಗೆ ಸೇರಿದ ಈ ಜಲಚರಗಳು ಸಸ್ತನ ಪ್ರಾಣಿಗಳು. ಇವುಗಳಲ್ಲಿ ಆನೆ-ಸೀಲ್ ಬಗೆಯ ಪ್ರಾಣಿಗಳು ನಾಲ್ಕು ಟನ್ನುಗಳ ಭಾರವೂ, ಆರು ಮೀಟರ್ ಎತ್ತರವೂ ಇರುತ್ತವೆ, ಇವು ನೀರಲ್ಲಿರುವ ಮೀನು, ನತ್ತೆ, ಏಡಿ, ಮೊದಲಾದ ಜಂತುಗಳನ್ನು ಹಿಡಿದು ತಿನ್ನುತ್ತವೆ. ಇವುಗಳ ಕಿವಿಗಳು ಕಾಣಿಸದಷ್ಟು ಬಹು ಚಿಕ್ಕವಾದರೂ ಇವುಗಳ ಶ್ರವಣಶಕ್ತಿ ಬಹಳ ಹೆಚ್ಚು ಎನ್ನುತ್ತಾರೆ.



ಇವುಗಳು ನೀರಿನ ಮೇಲೆ ಶ್ವಾಸ ತಿತ್ತಿಯ ತುಂಬಾ ಗಾಳಿ ಹೀರಿಕೊಂಡು, ನೀರಿನೊಳಗೆ ಮುಳುಗುತ್ತವೆ. ನೀರಿನೊಳಗಿರುವಾಗ ಗುಂಡಿಗೆ ನೆಮ್ಮದಿಯಾಗಿ ಹೊಡೆದುಕೊಳ್ಳುವುದರಿಂದ ಇವು ಬಹಳ ಹೊತ್ತು ನೀರಿನೊಳಗೆ ಇರಬಲ್ಲವು. ನೀರಿನೊಳಗೆ ಅತ್ಯಂತ ಚುರುಕಾಗಿರುವ ಈ ಪ್ರಾಣಿಗಳು ನೆಲದ ಮೇಲೆ ಬಂದರೆ ತುಂಬಾ ಜಡಮಾಂದ್ಯದಲ್ಲಿರುತ್ತವೆ !



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೫ ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



M. Natarajan



A. L. Syed

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಆಗಸ್ಟ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಜೂನ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ವಿಜಾತಿಗಳ ಒಗ್ಗಟ್ಟೇ ಹೀಗಿರುವಾಗ

ಎರಡನೇ ಫೋಟೋ : ಸಜಾತಿಗಳ ಒಗ್ಗಟ್ಟು ಕೇಳಬೇಕೆ?

ಕಳುಹಿಸಿದವರು : ಹೆಚ್. ಪೂರ್ಣಿಮಾ, ದಾವಣಗೆರೆ-೨

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಹೂಯಾನ್‌ಸ್ಸಾಂಗ್ ೨. ಚಾಳುಕ್ಯವಂಶ ೩. ಅಲ್ಲಾ ಉದ್ದೀನ್ ಖಿಲ್ಜೀ ೪. ಹದಿನಾಲ್ಕು ವರ್ಷಗಳು ೫. ಷಾಜೀಬೌನ್ಸ್ಲೇ

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

# ಮಾಲ್ಟೋವಾ ಟೋಳಿ ರಹಸ್ಯ ಹರುಷ ತಂದರು ನೋಡಿ

ಮಿನ್ನಿಯ ಹುಟ್ಟು ಹಬ್ಬವನ್ನು ಅದೇ ತಾನೇ ಆಚರಿಸಲಾಗಿತ್ತು. ಆ ದಿನ ಎಷ್ಟು ಮಜಾ...ಸುಂದರ ರುಚಿಕರ ಕೇಕ್, ಅದರ ಮೇಲೆ ಕ್ಯಾಂಡಲ್‌ಗಳು, ವಿಧವಿಧ ಗಮ್ಮತ್ತೋ ಗಮ್ಮತ್ತು...ಮಿನ್ನಿಯ ದಿವಸ ಆನಂದದ ಕ್ಷಣಗಳನ್ನು ಮೆಲುಕು ಹಾಕುತ್ತ ಟೋಳಿ ಉಳಿದಿದ್ದ ಕೇಕನ್ನು ಮೆಲ್ಲುತ್ತಿತ್ತು. ಪ್ರಿಯ ಮಾಲ್ಟೋವಾ ಕೂಡ ಸಿದ್ಧವಾಗಿತ್ತು. ಮಿನ್ನಿಗಂತೂ ಅಂದಿನದಿನ ಅನೇಕ ಉಡುಗೊರೆಗಳು ಬಂದಿದ್ದವು. ಆದರೂ, ವಿನ್ನಿ ಏಕೋ ಜೋಲು ಮೋರೆ ಹಾಕಿಕೊಂಡು ಮೂಲೆಯಲ್ಲಿ ಕುಳಿತಿದ್ದುದು ಎಲ್ಲರಿಗೂ ಆಶ್ಚರ್ಯವಾಗಿತ್ತು!

**ನಿನಗೇನಾಗಿದೆ ವಿನ್ನಿ?**

"ಹಾಯೂ, ನಿನ್ನೆಯ ಪಾರ್ಟಿಗೆ ಮಮ್ಮಿ ಧೀರೂವನ್ನೂ ಕರೆದಿದ್ದರು. ಧೀರೂ ನೆನಪಿದ್ದೀ...ಆ ಅನಾಥಾಶ್ರಮದ ಹುಡುಗ! ಪಾಪ, ಅವನೆಂದೂ ಬರ್ಥ್‌ಡೇ ಪಾರ್ಟಿ ಕಂಡೇ ಇಲ್ಲ. ಅನಾಥಾಶ್ರಮದ ಮಕ್ಕಳ ಬರ್ಥ್‌ಡೇ ಯಾರು ಮಾಡ್ತಾರೆ. ಇದೇ...ಶನಿವಾರ...ಧೀರೂನ ಬರ್ಥ್‌ಡೇ..." ವಿನ್ನಿಯ ಕಂಠ ಗದ್ಗದಿತವಾಯಿತು. ಬಾಯಿಂದ ಮಾತೇ ಹೊರಡಲಿಲ್ಲ. ಕಣ್ಣಿಂದ ನೀರಿನ ಹನಿಗಳು ಇಳಿದು ಗಲ್ಲವನ್ನು ಮುತ್ತಿಕ್ಕಿದವು. ಒಂದು ಕ್ಷಣ ಎಲ್ಲರೂ ಮೂಕಸ್ತಬ್ಧರಾದರು. ಧೀರೂ ಅವರ ಜೊತೆಗಿನ ಮಿತ್ರ...ಪುಟ್ಟ ಧೀರೂನ ಮುಖದಲ್ಲಿ ಆವರೆಂದೂ ನಗುವನ್ನು ಕಂಡಿರಲಿಲ್ಲ!

**ಸಲೀಮನಿಗೆ ಹೊಳೆಯಿತು ಸುಂದರ ಐಡಿಯಾ....**

ಸಲೀಮನ ಮೊಗದಲ್ಲೊಂದು ಮಂದಹಾಸ ಮಿನುಗಿತು. ಧೀರೂನ ಬರ್ಥ್‌ಡೇಯನ್ನು ಹಾವೆಲ್ಲಾ ಸೇರಿ ಆಚರಿಸುವ ವಿಸ್ಮಯವನ್ನು ಆತನಿಗೆ ಅರಿವಾಗ್ ಕೊಡಬೇಕೆಂದು ತನ್ನ ಯೋಜನೆಯನ್ನು ಸಲೀಮ್ ಎಲ್ಲರೆದುರು ಮಂಡಿಸಿದನು. ಸಲೀಮನ ಐಡಿಯಾ ಆಧಾರ ಮೇಲ್ಮಾಗೆ ವಡೆಯಿತು. ಪಾರ್ಟಿಗೆ ತಯಾರಿ ನಡೆಯಲಾರಂಭಿಸಿತು. ತಾವು ಕೂಡಿಟ್ಟ ಪುಡಿಗಾಸುಗಳನ್ನು ಕೊಡುವ ಉದಾರ ಮನಸ್ಸನ್ನು ಹಾಯು ತೋರಿದನು. ತನ್ನ ಅಮ್ಮ ಕೇಕ್ ಚೆನ್ನಾಗಿ ಮಾಡುತ್ತಾಳೆಂದು ಅರಿತಿದ್ದ ವೀಣಾ ಕೇಕಿನ ಹೊಣೆ ಹೊತ್ತಳು. ಸ್ವೀಟಾ ವಿದ್ಯಾ ಸಹಾಯ ಮಾಡಲು ಮಾಲತಿ ಮುಂದಾದಳು. ತನಗೆ ಬಂದ ಹಲವಾರು ಪ್ರೆಸೆಂಟ್‌ಗಳಲ್ಲಿ ಕೆಲವನ್ನು ಧೀರೂಗೆ ನೀಡಲು ಮಿನ್ನಿ ಸಂತೋಷದಿಂದ ಒಪ್ಪಿದಳು. ಈಗಂತೂ ಟೋಳಿಯ ಆನಂದಕ್ಕೆ ಪಾರವೇ ಇರಲಿಲ್ಲ. ಅವರಿಗದು ಅತ್ಯಂತ ಗೋಪ್ಯವಾದ ಮಹದಾನಂದದ ಸಂಗತಿಯಾಗಿತ್ತು.

**ಧೀರೂಗೊಂದು ಆಶ್ಚರ್ಯ ಕಾದಿತ್ತು....**

ಶನಿವಾರ ಧೀರೂವನ್ನು ಸಲೀಮನ ಮನೆಗೆ ಆಹ್ವಾನಿಸಲಾಗಿತ್ತು. ಏನನ್ನೋ ಕೈಲು ಒಯ್ದು ನಡೆಸಬೇಕೆಂಬುದನ್ನು ತಿಳಿಯದಿದ್ದುದರಿಂದ ಬಡವಾಯ ಧೀರೂ ಅಧೀರನಾದನು. ಆದರೂ ಮೆಲ್ಲನೇ ಬಾಗಿಲು ತಟ್ಟಲು ಆದು ನಿಧಾನವಾಗಿಯೇ ಮುಚ್ಚಿರುವುದು ಆರಿವಾಯಿತು. ಮೆಲ್ಲನೇ ಒಳಗೆ ಕಾಲಿಟ್ಟ ಧೀರೂ ಕೋಣೆ ತುಂಬಾ ಕತ್ತಲು ಕವಿದಿರುವುದನ್ನು ಕಂಡನು. "ಎಲ್ರೋ, ಎಲ್ಲಿದ್ದೀರೋ ನೀವೆಲ್ಲಾ" ಎಂದು ಆತ ಕೂಗಿದನು. ಪಕ್ಕನೇ ದೀಪಗಳು ಬೆಳಗಿದವು. ಚಪ್ಪಾಳೆಗಳ ನಾದದೊಂದಿಗೆ "ಹ್ಯಾಪಿ ಬರ್ಥ್‌ಡೇ" ಹಾಡಿನ ಘೋಷಗಳು. ಧೀರೂ ಚಕಿತನಾದ. ಆತನ ಅನಾಥಾಶ್ರಮದ ಸಂಗಡಿಗರೊಂದಿಗೆ ಮಾಲ್ಟೋವಾ ಟೋಳಿ ಆತನ ಸುತ್ತ ನೆರೆದಿರುವುದನ್ನು ಕಂಡ.

ಕೋಣೆ ತುಂಬಾ ಬಲೂನು ಮತ್ತು ಬಣ್ಣದ ಕಾಗದಗಳಿಂದ ಅಲಂಕರಿಸಲಾಗಿತ್ತು. ಮೇಜಿನ ಮೇಲೆ ದೊಡ್ಡದೊಂದು ಸುಂದರ ಕೇಕ್ ಕುಳಿತಿತ್ತು. ಉಪಹಾರಗಳನ್ನೆಲ್ಲಾ ಓರಣವಾಗಿ ಇರಿಸಲಾಗಿತ್ತು. ಬಿಸಿ ಬಿಸಿ ಮಾಲ್ಟೋವಾ ಸಿದ್ಧವಾಗಿತ್ತು. ಧೀರೂ ತನ್ನ ಕಣ್ಣುಗಳನ್ನು ತಾನೇ ನಂಬದಾದ. ಆನಂದ ಭಾಷ್ಪಗಳು ಆತನ ಕಣ್ಣಿನಿಂದ ಧಾರಾಕಾರವಾಗಿ ಇಳಿದವು. ಅಪೂರ್ವ ಮಂದಹಾಸ ಆತನ ಮುಖಾರವಿಂದವನ್ನು ಬೆಳಗಿತು.

**ಮಾಲ್ಟೋವಾದಲ್ಲಿದೆ ಅಪೂರ್ವ ವ್ಯತ್ಯಾಸ**

ಹೌದು, ಮಾಲ್ಟೋವಾ ಮಕ್ಕಳು ಜೀವನದ ಸಂಪೂರ್ಣ ಸಾರವನ್ನು ಸವಿಯುತ್ತಾರೆ. ಏಕೆಂದರೆ, ಪ್ರತಿ ಕಪ್ ಮಾಲ್ಟೋವಾದಲ್ಲಿ ನೋಡಿದೆ— ಉತ್ಕೃಷ್ಟ ಗೋಧಿ, ಬಾರ್ಲಿ, ಶುದ್ಧ ಹಾಲು, ಕ್ರೀಮ್ ಕೋಕೋ ಮತ್ತು ಸಕ್ಕರೆಯ ಸಂಪೂರ್ಣ ಸತ್ವಗಳ ಗಾಢ ಮಿಶ್ರಣ. ಅಧಿಕ ಪ್ರತಿರೋಧಕ ಶಕ್ತಿ, ಅಧಿಕ ಶಕ್ತಿ ಮತ್ತು ಅಧಿಕ ಸಾಮರ್ಥ್ಯಕ್ಕಾಗಿ ನಿಮ್ಮ ಮಕ್ಕಳಿಗೆ ಮಾಲ್ಟೋವಾ ನೀಡಿರಿ... ಮಕ್ಕಳು ಶಕ್ತಿಶಾಲಿ ಹಾಗೂ ಆರೋಗ್ಯಶಾಲಿಗಳಾಗಿ ಬೆಳೆಯುವುದನ್ನು ನೋಡಿರಿ. ನಿಮ್ಮ ಮಕ್ಕಳು ಜೀವನದ ಪ್ರತಿ ಕ್ಷಣವನ್ನು ಆನಂದಿಸಲು—ಮಾಲ್ಟೋವಾ.

**ಮಾಲ್ಟೋವಾ ಕ್ಲಬ್ ಸೇರಿರಿ.**
**ಇದು ಅತ್ಯಂತ ಸುಲಭ.**

500 ಗ್ರಾಮ್ ಜಾರ್‌ನ ಮೂರು ಲೇಬಲ್ ಮತ್ತು ಒಳಗಡೆಯ ಸೀಲ್‌ಗಳು ಅಥವಾ 500 ಗ್ರಾಮ್ ರೀಫಿಲ್ ಪ್ಯಾಕ್‌ನ ಮೂರು ಮೇಲಿನ ಫ್ಲ್ಯಾಪ್‌ಗಳನ್ನು ಈ ಕೆಳಗಿನ ವಿಳಾಸಕ್ಕೆ ಕಳಿಸಿ.

ದಿ ಮಾಲ್ಟೋವಾ ಕ್ಲಬ್, 4ನೇ ಮಾಳಿಗೆ, ಭಂಡಾರಿ ಹೌಸ್ 91, ನೆಹರು ಪ್ಲೇಸ್, ನವ ದೆಹಲಿ 110 019.

ಇನ್ನೇನು, ನೀವು ಸೇರಿಯೇ ಬಿಟ್ಟಿರಿ.




JIL ಜಗತ್‌ಜೀತ್ ಇಂಡಸ್ಟ್ರೀಸ್ ಲಿಮಿಟೆಡ್

**ವಿಟಮಿನ್-ಭರಿತ ಮಾಲ್ಟೋವಾ: ಆರೋಗ್ಯ, ಬಲ ಮತ್ತು ಶಕ್ತಿಗಾಗಿ**